CPMG / KA / BG-GPO/13/2003-2005

ವಿಶ್ವಮಾನವ ವರ್ಷ



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು


| ಸಂಪುಟ ೧೩೯ | ಬೆಂಗಳೂರು, ಗುರುವಾರ, ಆಗಸ್ಟ್ ೨೬, ೨೦೦೪ (ಭಾದ್ರಪದ ೪, ಶಕ ವರ್ಷ ೧೯೨೬) | ಸಂಚಿಕೆ ೩೫ |
|---|---|---|


## ಭಾಗ - ೫

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು.

**ತೋಟಗಾರಿಕೆ ಉಪ ನಿರ್ದೇಶಕರ ಕಛೇರಿ, ಕಬ್ಬನ್ ಉದ್ಯಾನವನ, ಬೆಂಗಳೂರು**

**ಟೆಂಡರ್ ಪ್ರಕಟಣೆ**

**ಸಂಖ್ಯೆ: ತೋಉನಿ:ಕಉ:ವಿನಿ2:ಬಿಜಿಟಿ:32:2004-05, ದಿನಾಂಕ: 10ನೇ ಆಗಸ್ಟ್ 2004**

ಕಬ್ಬನ್ ಉದ್ಯಾನವನದ ಅಧೀನದ ಹೈಕೋರ್ಟ್ ಮುಂಭಾಗದಲ್ಲಿ ಹುಲ್ಲುಹಾಸನ್ನು ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು, ಭೂದೃಶ್ಯ ವಿಭಾಗ, ಲಾಲ್‌ಬಾಗ್, ಬೆಂಗಳೂರು ರವರು ನೀಡಿರುವ ಅಂದಾಜುಪಟ್ಟಿಯಂತೆ ಅಭಿವೃದ್ಧಿಪಡಿಸಬೇಕಾಗಿರುತ್ತದೆ. ಅಧಿಕೃತ ಗುತ್ತಿಗೆದಾರರು ಈ ಕೆಳಗೆ ಸೂಚಿಸಿದ ವಿವರಗಳಂತೆ ಹೈಕೋರ್ಟ್ ಮುಂಭಾಗ ಹಾಗೂ ಮೀಡಿಯನ್ ಪಕ್ಕದಲ್ಲಿ ಇರುವ ಜಾಗವನ್ನು ಹುಲ್ಲುಹಾಸಿನಿಂದ ಅಭಿವೃದ್ಧಿಪಡಿಸಲು ನಿಮ್ಮ ಟೆಂಡರ್‌ನ್ನು ಮೊಹರಾದ ಲಕೋಟೆಯಲ್ಲಿಟ್ಟು ದಿನಾಂಕ: 10.9.2004 ರಂದು ಸಂಜೆ 4.00 ಗಂಟೆಯೊಳಗೆ ಈ ಕಛೇರಿಗೆ ನೀಡಲು ಕೋರಿದೆ.

ವಿವರಗಳು

| 1) | ಹುಲ್ಲುಹಾಸನ್ನು ಅಭಿವೃದ್ಧಿಪಡಿಸುವುದು: | |
|---|---|---|
| 1. | ನೆಲವನ್ನು ಕೆತ್ತುವುದು, ಮೇಲ್ಪದರದ ಮಣ್ಣು ತೆಗೆಯುವುದು. ಹುಲ್ಲುಹಾಸು ಹಾಕುವ ಜಾಗವನ್ನು ಕೆತ್ತುವುದು ಹಾಗೂ ಮೇಲ್ಪದರದ 0.15 ಮೀ. ಮಣ್ಣನ್ನು ಕನಿಷ್ಠ 0.45 ಮೀ. ಆಳದವರೆಗೆ ತೆಗೆಯುವುದು ನಂತರ ಅನುಪಯುಕ್ತ ಡೆಬರೀಸ್, ಹುಲ್ಲು ಹಾಗೂ ಇತ್ಯಾದಿ ಕಳೆ ಇವುಗಳನ್ನು ತೆಗೆದು, ಮಣ್ಣಿನ ಜೊತೆಯಲ್ಲಿ 500 ಮೀ. ದೂರದವರೆಗೆ ಹೊರಗೆ ಸಾಗಿಸುವುದು (ತುಂಬುವುದು ಹಾಗೂ ಸಾಗಾಣಿಕೆ ಸೇರಿ) | 180 ಘ.ಮೀ. |
| | ಮೊದಲ ಅಗತೆ: | |
| 2. | ಹುಲ್ಲು ಹಾಸು ಹಾಕಲು ಮಣ್ಣನ್ನು ಅಗೆಯುವುದು, ಕಳೆಗಳನ್ನು ತೆಗೆಯುವುದು ಅನುಪಯುಕ್ತ ಡೆಬರೀಸ್ ಹಾಗೂ ಗಂಟೆಗಳನ್ನು ಹೊಡೆದು ಹಾಕಿ ನೀರು ಹಾಯಿಸುವುದು (1200 X 0.45) | 540 ಘ.ಮೀ. |
| | ಎರಡನೇ ಅಗತೆ: | |
| 3. | ಹುಲ್ಲು ಹಾಸು ಹಾಕುವ ಜಾಗವನ್ನು ಎರಡನೇ ಬಾರಿಗೆ ಕಳೆ ಇತ್ಯಾದಿಗಳನ್ನು ತೆಗೆದು ಸಮತಟ್ಟು ಮಾಡುವುದು. | 540 ಘ.ಮೀ. |
| 4. | ಅಗತ್ಯವಿರುವ ಕೆಂಪು ಮಣ್ಣನ್ನು ಕ್ರೋಢೀಕರಿಸಿ ಹುಲ್ಲುಹಾಸು ಹಾಕುವ ಜಾಗಕ್ಕೆ ತುಂಬುವುದು. (1200 X 0.15) | 180 ಘ.ಮೀ. |
| 5. | ಹುಲ್ಲುಹಾಸು ಹಾಕಲು ಬೇಕಾಗುವ ಇತರೆ ಪರಿಕರಗಳಾದ ಮರಳು, ಕೊಟ್ಟಿಗೆ ಗೊಬ್ಬರ, ಕೆಂಪು ಮಣ್ಣು, ಇವುಗಳನ್ನು 1:3:6 ಪ್ರಮಾಣದಲ್ಲಿ ಬೆರೆಸಿ ಮಿಶ್ರಣ ಮಾಡಿ ಇವುಗಳನ್ನು 7.5 ಸಿ.ಎಂ. ದಪ್ಪಕ್ಕೆ ಹರಡುವುದು.<br>ಕೊಟ್ಟಿಗೆ ಗೊಬ್ಬರ<br>ಮರಳು<br>ಕೆಂಪು ಮಣ್ಣು | <br><br>27 ಘ.ಮೀ.<br>9 ಘ.ಮೀ.<br>54 ಘ.ಮೀ. |

| | | |
|---|---|---|
| 6. | ಹುಲ್ಲುಹಾಸು ಹಾಕಲು ಬೇಕಾಗಿರುವ ರಸಗೊಬ್ಬರ ಹಾಗೂ ಹಿಂಡಿಗಳು, ಬೇವಿನ ಹಿಂಡಿ, ಬೋನಮೀಲ್, ಪೊಟಾಶ್, ಅಮೋನಿಯಂ, ಸಲ್ಫೇಟ್ ಮತ್ತು ಸಸ್ಯಸಂರಕ್ಷಣೆ, ಔಷಧಿಗಳು ಫ್ಯುರಿಡಾನ್ ಹಾಗೂ ತಿಮೆಟ್ ಇವುಗಳನ್ನು ಸರಬರಾಜು ಮಾಡುವುದು. | 1200 ಚ.ಮೀ. |
| 7. | ಹುಲ್ಲುಹಾಸನ್ನು ಅಭಿವೃದ್ಧಿಪಡಿಸಲು ಈ ಕೆಳಕಂಡ ಅಳತೆಗೆ ಬರ್ಮುಡಾ ಹುಲ್ಲನ್ನು ಸರಬರಾಜು ಮಾಡಬೇಕಾಗಿರುತ್ತದೆ. | 1200 ಚ.ಮೀ. |
| **2)** | **ನಿರ್ವಹಣೆ:** | 3 ತಿಂಗಳು |

**ನಿಬಂಧನೆಗಳು ಮತ್ತು ಷರತ್ತುಗಳು:**

1. ಟೆಂಡರ್ ಫಾರಂ ಜೊತೆಯಲ್ಲಿ ರೂ.5000-00 ಗಳ ಇ.ಎಂ.ಡಿ. ಯನ್ನು ಯಾವುದಾದರೂ ರಾಷ್ಟ್ರೀಕೃತ ಬ್ಯಾಂಕಿನಿಂದ ಪಡೆದು ತೋಟಗಾರಿಕೆ ಉಪ ನಿರ್ದೇಶಕರು, ಕಬ್ಬನ್‌ಪಾರ್ಕ್, ತೋಟಗಾರಿಕೆ ಇಲಾಖೆ ಇವರಿಗೆ ಸಂದಾಯವಾಗುವಂತೆ ಪಡೆದು ಸಲ್ಲಿಸಬೇಕು. ಡಿ.ಡಿ. ಇಲ್ಲದಿದ್ದ ಪಕ್ಷದಲ್ಲಿ ಅಂತಹ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.
2. ಟೆಂಡರ್ ಫಾರಂಗಳನ್ನು ಸೀಲ್ ಮಾಡಿರಬೇಕು. ಹಾಗೂ 2004-05ನೇ ಸಾಲಿನ ಹೈಕೋರ್ಟ್ ಮುಂಭಾಗದ ಹುಲ್ಲುಹಾಸು ಅಭಿವೃದ್ಧಿಗೆ ಎಂದು ನಮೂದಾಗಿರಬೇಕು.
3. ಟೆಂಡರ್ ಫಾರಂಗಳನ್ನು ಈ ಕಛೇರಿಯಿಂದ ದಿನಾಂಕ: 8.9.2004 ರಿಂದ 9.9.2004 ವರೆಗೆ ರೂ.500-00 ಗಳನ್ನು ಪಾವತಿಸಿ ಪಡೆಯಬಹುದು.
4. ಟೆಂಡರ್ ಫಾರಂಗಳನ್ನು ಈ ಕಛೇರಿಗೆ ಸಲ್ಲಿಸುವ ಕಡೆಯ ದಿನಾಂಕ: 10.9.2004 ರಂದು 4.00 ಗಂಟೆವರೆಗೆ 4.00 ಗಂಟೆಯ ನಂತರ ಬಂದ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು. ಹಾಗೂ ಅಂದೇ ಸಂಜೆ 5.00 ಗಂಟೆಗೆ ಹಾಜರಿರುವ ಟೆಂಡರ್‌ದಾರರ ಸಮ್ಮುಖದಲ್ಲಿ ಟೆಂಡರ್‌ಗಳನ್ನು ತೆರೆಯಲಾಗುವುದು.
5. ಯಶಸ್ವಿ ಟೆಂಡರ್‌ದಾರರು ಹುಲ್ಲುಹಾಸು ನಿರ್ಮಾಣದ ನಂತರ 3 ತಿಂಗಳ ಕಾಲ ನಿರ್ವಹಣೆ ಮಾಡಬೇಕಾಗಿರುತ್ತದೆ.
6. ಟೆಂಡರ್‌ದಾರರು ಕಳೆದ ಸಾಲಿನ ಆದಾಯ ತೆರಿಗೆ ಕ್ಲಿಯರೆನ್ಸ್ ಸರ್ಟಿಫಿಕೇಟನ್ನು ಟೆಂಡರ್‌ನೊಂದಿಗೆ ಲಗತ್ತಿಸಬೇಕು.
7. ಕಳೆದ ಎರಡು ವರ್ಷಗಳಲ್ಲಿ ಹುಲ್ಲುಹಾಸು ನಿರ್ವಹಿಸಿದ ಬಗ್ಗೆ ಅನುಭವ ದೃಢೀಕರಣ ಪತ್ರ ಲಗತ್ತಿಸಬೇಕು.
8. ಆದಾಯ ತೆರಿಗೆ ಹಾಗೂ ಮಾರಾಟ ತೆರಿಗೆ ಅನ್ವಯವಾದಲ್ಲಿ ನಿಯಮಾನುಸಾರ ಬಿಲ್ಲಿನ ಮೂಲದಲ್ಲಿ ಕಟಾಯಿಸಲಾಗುವುದು.
9. ಟೆಂಡರ್‌ದಾರರು ಯಾವುದೇ ಪೂರ್ವ ಷರತ್ತುಗಳನ್ನು ವಿಧಿಸುವಂತಿಲ್ಲ.
10. ಟೆಂಡರ್‌ಗಳನ್ನು ಪುರಸ್ಕರಿಸುವ ಮತ್ತು ತಿರಸ್ಕರಿಸುವ ಹಕ್ಕು ತೋಟಗಾರಿಕೆ ನಿರ್ದೇಶಕರು, ಲಾಲ್‌ಬಾಗ್, ಬೆಂಗಳೂರು ರವರದೇ ಅಂತಿಮ ತೀರ್ಮಾನವಾಗಿರುತ್ತದೆ.
11. ಹೆಚ್ಚಿನ ಮಾಹಿತಿ ಮತ್ತು ವಿಷಯಗಳಿಗೆ ತೋಟಗಾರಿಕೆ ಉಪ ನಿರ್ದೇಶಕರು, ಕಬ್ಬನ್‌ಪಾರ್ಕ್, ಬೆಂಗಳೂರು ರವರ ಕಛೇರಿಯಲ್ಲಿ ಪಡೆಯಬಹುದು.

ಪಿ.ಆರ್. 382                ತೋಟಗಾರಿಕೆ ಉಪ ನಿರ್ದೇಶಕರು, ಕಬ್ಬನ್ ಉದ್ಯಾನವನ, ಬೆಂಗಳೂರು.

**ಸಹಾಯಕ ಕೃಷಿ ನಿರ್ದೇಶಕರ ಕಛೇರಿ, ತುಮಕೂರು, ತುಮಕೂರು ಜಿಲ್ಲೆ**

**ಪ್ರಕಟಣೆ ಸಂಖ್ಯೆ: ಸಕೃನಿ:ತು:ಲೆಕ್ಕ-1:ಅನುಪಯುಕ್ತ:ವಾಹನ:ವಿಲೇವಾರಿ:04-05, ದಿನಾಂಕ: 10ನೇ ಸೆಪ್ಟೆಂಬರ್ 2004**

ಈ ಕಛೇರಿಯಲ್ಲಿರುವ ಅನುಪಯುಕ್ತ ವಾಹನ ಸಿಕೆಜಿ 147 ಜೀಪನ್ನು ದಿನಾಂಕ: 15ನೇ ಸೆಪ್ಟೆಂಬರ್ 2004 ರಂದು ಮಧ್ಯಾಹ್ನ 4.00 ಗಂಟೆಗೆ ಸಹಾಯಕ ಕೃಷಿ ನಿರ್ದೇಶಕರ ಕಛೇರಿ, ತುಮಕೂರಿನಲ್ಲಿ ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡಲಾಗುವುದು.

**ಷರತ್ತುಗಳು**

1) ಹರಾಜಿನಲ್ಲಿ ಭಾಗವಹಿಸುವವರು ರೂ.5000-00 (ಐದು ಸಾವಿರ ರೂ.ಗಳು) ಹಣವನ್ನು ಮುಂಗಡ ಠೇವಣಿಯಾಗಿ ಕಛೇರಿಯಲ್ಲಿ ಪಾವತಿಸಿ ರಶೀತಿಯನ್ನು ಪಡೆಯುವುದು.

2) ಈ ಠೇವಣಿ ಹಣವನ್ನು ಅತೀ ಹೆಚ್ಚಿನ ಬಿಡ್‌ದಾರರು ಖರೀದಿಸಿದ ಮೊಬಲಗಿಗೆ ಪರಿಗಣಿಸಿ ಉಳಿದವರಿಗೆ ಠೇವಣಿ ಹಣವನ್ನು ಸ್ಥಳದಲ್ಲೇ ಹಿಂದಿರುಗಿಸಲಾಗುವುದು.

3) ಹರಾಜಿನಲ್ಲಿ ಅತ್ಯಂತ ಹೆಚ್ಚಿನ ಬಿಡ್ಡಿಗೆ ಮಾನ್ಯ ನೀಡಲಾಗುವುದು. ಹಾಗೂ ಹರಾಜನ್ನು ಅಂಗೀಕರಿಸುವ ಅಥವಾ ತಿರಸ್ಕರಿಸುವ ಅಧಿಕಾರ ಹರಾಜು ನಡೆಸುವ ಪ್ರಾಧಿಕಾರಕ್ಕೆ ಸೇರಿರುತ್ತದೆ.

4) ಈ ಅನುಪಯುಕ್ತ ವಾಹನದ ಅತೀ ಹೆಚ್ಚಿನ ಬಿಡ್‌ದಾರರು ಶೇ.50 ರಷ್ಟು ಹಣವನ್ನು ನಗದಾಗಿ ಸ್ಥಳದಲ್ಲೇ ಪಾವತಿಸಿ ರಶೀತಿ ಪಡೆಯುವುದು, ಉಳಿದ ಶೇ.50ರ ಹಣವನ್ನು ತೆರಿಗೆಯೊಂದಿಗೆ ಹರಾಜು ಸ್ಥಿರೀಕರಣ ಆದೇಶ ಬಂದ ನಂತರ 15 ದಿನಗಳೊಳಗೆ ಪಾವತಿಸಿ ವಾಹನವನ್ನು ತೆಗೆದುಕೊಂಡು ಹೋಗುವುದು.

5) ಒಂದು ವೇಳೆ ತಿಳಿಸಲಾಗಿರುವ ಅವಧಿಯೊಳಗೆ ಪೂರ್ತಿ ಹಣವನ್ನು ಪಾವತಿಸುವಲ್ಲಿ ವಿಫಲವಾದಲ್ಲಿ ಈ ವಾಹನವನ್ನು ಮರು ಹರಾಜು ಮಾಡಲಾಗುವುದು. ಇದರಿಂದ ಉಂಟಾಗಬಹುದಾದ ನಷ್ಟಗಳಿಗೆ ಬಿಡ್‌ದಾರರೆ ಹೊಣೆಯಾಗಿರುತ್ತಾರೆ.

6) ಈ ಅನುಪಯುಕ್ತ ವಾಹನದ ಬಗ್ಗೆ ಮಾಹಿತಿಯನ್ನು ರಜಾ ದಿನಗಳನ್ನು ಹೊರತುಪಡಿಸಿ ಕಛೇರಿಯ ಕೆಲಸದ ವೇಳೆಯಲ್ಲಿ ಪಡೆಯಬಹುದಾಗಿದೆ.

ಸಹಾಯಕ ಕೃಷಿ ನಿರ್ದೇಶಕರು, ತುಮಕೂರು.

**ಪ್ರಪತ್ರ 34-ಬಿ**

| ಕ್ರ. ಸಂ. | ಸರಕು ಭಂಡಾರದ ವಿವರ | ಪ್ರಮಾಣ ಅಥವಾ ತೂಕ | ಖರೀದಿಸಿದ ದಿನಾಂಕ | ಖರೀದಿಸಿದ ದರ | ವಿಲೇವಾರಿ ವಿಧಾನ | ವಾಹನ ಸ್ಥಿತಿ | ವಾಹನ ನಿಲುಗಡೆ ಯಾಗಿರುವ ಮತ್ತು ಬಹಿರಂಗ ಹರಾಜು ಮಾಡಲಾಗುವ ಸ್ಥಳ |
|---|---|---|---|---|---|---|---|
| 1) | ಮಹೇಂದ್ರ ಜೀಪ್ (ಡೀಸಲ್) ಮಾಡಲ್ 1986 ಸಿಕೆಜಿ 147 | ಒಂದು | 12.06.86 | ರೂ. 109942 | ಬಹಿರಂಗ ಹರಾಜು | ಅನುಪಯುಕ್ತ | ಸಕೃನಿ ಕಛೇರಿ, ತುಮಕೂರು. |

ಪಿ.ಆರ್. 389 ಸಹಾಯಕ ಕೃಷಿ ನಿರ್ದೇಶಕರು, ತುಮಕೂರು.

**FORM - IV**
**(See Rule 12)**
**NOTICE**

It is hereby notified that the undersigned has changed his/her name from **M. PATLAMMA** to **M. PANKAJA.**

PD. 143 **M. PANKAJA**

**ಲೋಕೋಪಯೋಗಿ ಇಲಾಖೆ**

**ಕಾರ್ಯಪಾಲಕ ಅಭಿಯಂತರರ ಕಛೇರಿ, ಲೋಕೋಪಯೋಗಿ ಇಲಾಖೆ, ಶಿವಮೊಗ್ಗ ವಿಭಾಗ, ಶಿವಮೊಗ್ಗ**

**ಟೆಂಡರ್ ಪ್ರಕಟಣೆ**

**ಸಂಖ್ಯೆ: ಕಾ.ಅ:ಶಿ.ವಿ.ಶಿ:ಎ.ಇ.1/ಕಟ್ಟಡ/11/2004-05/1400, ದಿನಾಂಕ: 9ನೇ ಆಗಸ್ಟ್ 2004**

ಕರ್ನಾಟಕ ಲೋಕೋಪಯೋಗಿ ಇಲಾಖೆಯಲ್ಲಿ ನೋಂದಾಯಿತರಾದ ಗುತ್ತಿಗೆದಾರರಿಂದ ಈ ಕೆಳಕಂಡ ಕೆಲಸಗಳಿಗೆ ನಿಗದಿತ ನಮೂನೆಯಲ್ಲಿ ಮೊಹರಾದ ಲಕೋಟೆಯ ಮೇಲೆ ಕೆಲಸದ ಹೆಸರುಗಳನ್ನು ಬರೆದಿರುವ ಟೆಂಡರ್‌ಗಳನ್ನು ದ್ವಿಪ್ರತಿಗಳಲ್ಲಿ ಕರ್ನಾಟಕ ಸರ್ಕಾರದ ರಾಜ್ಯಪಾಲರ ಪರವಾಗಿ ಈ ಕೆಳಗಡೆ ಸಹಿ ಮಾಡಿರುವವರು ಆಹ್ವಾನಿಸಿರುತ್ತಾರೆ. ಅವುಗಳನ್ನು ಈ ಕೆಳಗೆ ಸೂಚಿಸಿರುವ ದಿನಾಂಕಗಳಂದು ಸಾಯಂಕಾಲ 4.30 ಗಂಟೆಯವರೆಗೆ ಸ್ವೀಕರಿಸಲಾಗುವುದು. ಸಾಧ್ಯವಾದರೆ ಅದೇ ದಿನ ಸಾಯಂಕಾಲ 5.00 ಗಂಟೆಗೆ ಅಥವಾ ಇತರೆ ಅನುಕೂಲವಾದ ದಿನ ಟೆಂಡರುದಾರರು ಅಥವಾ ಅವರ ಏಜೆಂಟರುಗಳ ಸಮ್ಮುಖದಲ್ಲಿ ತೆರೆಯಲಾಗುವುದು. ಸಾರ್ವಜನಿಕ ರಜವಾದರೆ ಮಾರನೆಯ ದಿನವೇ ಈ ದಿನಾಂಕದ ಬದಲು ಅನ್ವಯಿಸುತ್ತದೆ ಎಂದು ತಿಳಿಯತಕ್ಕದ್ದು. ಯಾವುದೇ ಅಥವಾ ಎಲ್ಲಾ ಟೆಂಡರ್‌ಗಳನ್ನು ಕಾರಣ ನೀಡದೇ ತಿರಸ್ಕರಿಸುವ ಹಕ್ಕನ್ನು ಕಾಯ್ದಿರಿಸಲಾಗಿದೆ.

ಟೆಂಡರ್ ಫಾರಂಗಳನ್ನು ಕಛೇರಿಯ ಕೆಲಸದ ವೇಳೆಯಲ್ಲಿ ಈ ಕೆಳಗೆ ನಮೂದಿಸಲಾಗಿರುವ ದಿನಾಂಕಗಳಲ್ಲಿ ನಿಗದಿತ ಟೆಂಡರ್ ಫಾರಂಗಳ ಬೆಲೆಯನ್ನು ನೀಡಿ ಪಡೆಯಬಹುದು. ಹಾಗೂ ಟೆಂಡರ್ ಫಾರಂ ಬೆಲೆಯನ್ನು ಯಾವುದೇ ಕಾರಣಕ್ಕೂ ಹಿಂದಿರುಗಿಸ ಲಾಗುವುದಿಲ್ಲ. ನಿಗದಿಪಡಿಸಿದ ಇ.ಎಂ.ಡಿ. ಯನ್ನು ಯಾವುದೇ ರಾಷ್ಟ್ರೀಕೃತ ಬ್ಯಾಂಕ್‌ನಿಂದ ಪಡೆದ ಎಫ್.ಡಿ.ಆರ್, ಸಿ.ಡಿ.ಆರ್, ಬ್ಯಾಂಕ್ ಗ್ಯಾರಂಟಿ (ಕನಿಷ್ಟ ಒಂದು ವರ್ಷ) ರೂಪದಲ್ಲಿ ನೀಡತಕ್ಕದ್ದು. ಒಂದು ವೇಳೆ ಎನ್.ಎಸ್.ಸಿ. ಆಗಿದ್ದಲ್ಲಿ, ಕಾರ್ಯಪಾಲಕ ಅಭಿಯಂತರವರ ಹೆಸರಿಗೆ ಪ್ಲೆಡ್ಜ್ ಮಾಡಿಸತಕ್ಕದ್ದು.

**ನಿಬಂಧನೆಗಳು**

1) ಅರ್ಜಿದಾರರು ಟೆಂಡರ್ ಕರೆದ ಕಾಮಗಾರಿಯಂತಹ ಕಾಮಗಾರಿಗಳನ್ನು ದಕ್ಷತೆಯಿಂದ ನಿರ್ವಹಿಸಿದ ಅನುಭವ ಇರಬೇಕು. ಸರ್ಕಾರಿ ಆದೇಶ ಸಂಖ್ಯೆ: ಪಿಡಬ್ಲ್ಯೂಡಿ 344 ಸಿಆರ್‌ಎಮ್ 2000, ದಿನಾಂಕ: 15.01.2002ರ ಪ್ರಕಾರ ಈ ಕಾಮಗಾರಿಗಳಿಗೆ ನಿರ್ದಿಷ್ಟಪಡಿಸಿದ ಮೊತ್ತದ ಶೇಕಡ 30 ರಷ್ಟು ಮೊತ್ತದ ಸಮನಾದ ಕಾಮಗಾರಿಯನ್ನು ಅರ್ಜಿದಾರರು ಹಿಂದಿನ ಐದು ಆರ್ಥಿಕ ವರ್ಷಗಳ ಬ್ಲಾಕ್ ಕಾಲಾವಕಾಶದಲ್ಲಿ ಯಾವುದೇ ಒಂದು ಆರ್ಥಿಕ ವರ್ಷದಲ್ಲಿ ತೃಪ್ತಿಕರವಾಗಿ ಪೂರೈಸಿರಬೇಕು. ಇದಕ್ಕೆ ಸಂಬಂಧಿಸಿದಂತೆ ಸಕ್ಷಮ ಅಧಿಕಾರಿಗಳಿಂದ ದೃಢೀಕರಣ ಪತ್ರವನ್ನು ಒದಗಿಸತಕ್ಕದ್ದು.
2) ಗುತ್ತಿಗೆದಾರರು ಈ ಹಿಂದೆ ಯಾವುದೇ ಕೆಲಸಗಳನ್ನು ಪೂರ್ಣಗೊಳಿಸದೆ ಮಧ್ಯದಲ್ಲಿ ತೊರೆದಿರಬಾರದು ಹಾಗೂ ಸಕಾರಣವಿಲ್ಲದೆ ಯಾವುದೇ ಕಾಮಗಾರಿಗಳನ್ನು ವಿಳಂಬವಾಗಿ ಪೂರೈಸಿರಬಾರದು.
3) ಟೆಂಡರ್ ಹಾಕಬಯಸುವ ಗುತ್ತಿಗೆದಾರರು ಎರಡು ಯಾಂತ್ರೀಕೃತ ಕಾಂಕ್ರೀಟ್ ಮಿಕ್ಸರ್, ಎರಡು ವೈಬ್ರೇಟರ್ (ಪಿನ್), ಒಂದು ಸ್ವಯಂಚಾಲಿತ ಲಿಫ್ಟ್, ಸೆಂಟರಿಂಗ್ ಮೆಟೀರಿಯಲ್ಸ್ ಹಾಗೂ ಕಟ್ಟಡ ಕಾಮಗಾರಿಗೆ ಅವಶ್ಯವಿರುವ ಎಲ್ಲಾ ಯಂತ್ರೋಪಕರಣ ಮತ್ತು ಸಲಕರಣೆಗಳನ್ನು ಹೊಂದಿರುವ ಬಗ್ಗೆ ದಾಖಲೆ ಒದಗಿಸತಕ್ಕದ್ದು.
4) ಇಲಾಖೆಯಿಂದ ಯಾವುದೇ ವಸ್ತುಗಳನ್ನು ಸರಬರಾಜು ಮಾಡುವುದಿಲ್ಲ. ಕಾಮಗಾರಿಗಳಿಗೆ ಬೇಕಾದಂತಹ ಕಬ್ಬಿಣ, ಸಿಮೆಂಟ್ ಇತ್ಯಾದಿಗಳನ್ನು ಗುತ್ತಿಗೆದಾರರು ಸ್ವಂತ ಖರ್ಚಿನಲ್ಲಿ ತಂದು ಗುಣಮಟ್ಟದ ಬಗ್ಗೆ ದೃಢೀಕರಿಸಿದ ನಂತರ ಉಪಯೋಗಿಸತಕ್ಕದ್ದು.
5) ಅರ್ಜಿದಾರರು ತಮ್ಮ ಗುತ್ತಿಗೆ ನೋಂದಣಿ ಪ್ರಮಾಣ ಪತ್ರದ ಪ್ರತಿಯನ್ನು ಅರ್ಜಿಯೊಂದಿಗೆ ಸಲ್ಲಿಸಬೇಕು.
6) ಗುತ್ತಿಗೆದಾರರು ಒಂದು ವರ್ಷದವರೆಗೆ ಪೂರೈಸಿದ ಕಾಮಗಾರಿಯ ನಿರ್ವಹಣೆಯನ್ನು ಮಾಡತಕ್ಕದ್ದು.
7) ಗುತ್ತಿಗೆದಾರರು ಸದರಿ ಕಾಮಗಾರಿಯನ್ನು ನಿರ್ವಹಿಸುವ ಆರ್ಥಿಕ ಸಾಮರ್ಥ್ಯದ ಬಗ್ಗೆ ಬ್ಯಾಂಕಿನಿಂದ ಪಡೆದ ಸೂಕ್ತ ದೃಢೀಕರಣ ಪತ್ರ ಲಗತ್ತಿಸತಕ್ಕದ್ದು. (Line of Credit)

ಹೆಚ್ಚಿನ ವಿವರಗಳು ಬೇಕಾದಲ್ಲಿ ಕಛೇರಿಯ ಕೆಲಸದ ವೇಳೆಯಲ್ಲಿ ಪಡೆಯಬಹುದು.

**ಪಿ.ಆರ್. ಗಿರಿಯಪ್ಪ**
ಕಾರ್ಯಪಾಲಕ ಅಭಿಯಂತರು,
ಲೋಕೋಪಯೋಗಿ ಇಲಾಖೆ, ಶಿವಮೊಗ್ಗ ವಿಭಾಗ, ಶಿವಮೊಗ್ಗ.

**ಟೆಂಡರಿಗಿಟ್ಟ ಕಾಮಗಾರಿಗಳ ವಿವರ**

| ಕ್ರ. ಸಂ. | ಕಾಮಗಾರಿಯ ವಿವರ | ಟೆಂಡರಿ ಗಿಟ್ಟ ಮೊತ್ತ (ರೂ. ಲಕ್ಷಗಳಲ್ಲಿ) | ಇಎಂಡಿ ಮೊತ್ತ (ರೂ. ಗಳಲ್ಲಿ) | ಟೆಂಡರ್ ಫಾರಂ ಬೆಲೆ (ರೂ. ಗಳಲ್ಲಿ) | ಅರ್ಹರಾದ ಗುತ್ತಿಗೆ ದಾರರು | ಟೆಂಡರ್ ಕಾಮಗಾರಿಗಳನ್ನು ಪರಿಪೂರ್ಣವಾಗಿ ಮುಗಿಸಲು ನಿಗದಿ ಪಡಿಸಿದ ಕಾಲಾವಧಿ | ಟೆಂಡರ್ ಫಾರಂಗಳಿಗೆ ಅರ್ಜಿಯನ್ನು ಸ್ವೀಕರಿಸುವ ದಿನಾಂಕ ಸಂಜೆ 5.30ರ ವರೆಗೆ | ಖಾಲಿ ಟೆಂಡರ್ ಫಾರಂ ಕೊಡುವ ದಿನಾಂಕ ಸಂಜೆ 5.30 ರವರೆಗೆ | ಭರ್ತಿ ಮಾಡಿದ ಟೆಂಡರ್ ಫಾರಂ ಸ್ವೀಕರಿಸುವ ದಿನಾಂಕ ಸಂಜೆ 4.30 ಗಂಟೆ ವರೆಗೆ |
|---|---|---|---|---|---|---|---|---|---|
| 1 | ಶಿಕಾರಿಪುರ ಜೆ.ಎಂ.ಎಫ್.ಸಿ. ನ್ಯಾಯಾಲಯದ ಸುತ್ತ ಕಾಂಪೌಂಡ್ ಗೋಡೆ ನಿರ್ಮಾಣ | 8.14 | 16280/- | 1108/- | 3ನೇ ದರ್ಜೆ | 3 ತಿಂಗಳು ಮಳೆಗಾಲ ಸೇರಿ | 06.09.04 | 13.09.04 | 20.09.04 |
| 2 | ಸೊರಬದಲ್ಲಿ ಜೆ.ಎಂ.ಎಫ್.ಸಿ. ಕೋರ್ಟ್ ವಸತಿ ಗೃಹಗಳ ನಿರ್ಮಾಣ | 50.00 | 50000/- | 2200/- | 1ನೇ ದರ್ಜೆ | 12 ತಿಂಗಳು ಮಳೆಗಾಲ ಸೇರಿ | 06.09.04 | 13.09.04 | 20.09.04 |
| 3 | ಸೊರಬದಲ್ಲಿ ಅಗ್ನಿಶಾಮಕ ಠಾಣೆ ಕಟ್ಟಡ ನಿರ್ಮಾಣ | 30.00 | 30000/- | 2200/- | 1ನೇ ದರ್ಜೆ | 9 ತಿಂಗಳು ಮಳೆಗಾಲ ಸೇರಿ | 06.09.04 | 13.09.04 | 20.09.04 |

ಕಾರ್ಯಪಾಲಕ ಅಭಿಯಂತರು,
ಪಿ.ಆರ್. 383 ಲೋಕೋಪಯೋಗಿ ಇಲಾಖೆ, ಶಿವಮೊಗ್ಗ ವಿಭಾಗ, ಶಿವಮೊಗ್ಗ.

## ಕರ್ನಾಟಕ ಅರಣ್ಯ ಇಲಾಖೆ
## ಹಳಿಯಾಳ ಪ್ರಾದೇಶಿಕ ಅರಣ್ಯ ವಿಭಾಗ
## ಅಧಿಕೃತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ, ಹಳಿಯಾಳ ವಿಭಾಗ, ಹಳಿಯಾಳ
## ಟೆಂಡರ್ ಹರಾಜಿನ ಅಧಿಸೂಚನೆ

**ಸಂಖ್ಯೆ: ಸಿ2/ಎಡಿಎಮ್/ವಾಹನ/ವಿಲೇವಾರಿ/ಸಿಆರ್-21/2004-05, ದಿನಾಂಕ: 9ನೇ ಆಗಸ್ಟ್ 2004**

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, ಹಳಿಯಾಳ ಅರಣ್ಯ ವಿಭಾಗದಲ್ಲಿ ಈ ಕೆಳಗೆ ನಮೂದಿಸಿರುವ ವಾಹನಗಳನ್ನು ಗುನ್ನೆ ಪ್ರಕರಣದಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿದ್ದು ಮುಟ್ಟುಗೋಲು ಹಾಕಿಕೊಂಡ ವಾಹನಗಳನ್ನು ಇದ್ದ ಸ್ಥಿತಿಯಲ್ಲಿಯೇ ಟೆಂಡರ್ ಹರಾಜನ್ನು ಈ ಕೆಳಗೆ ತಿಳಿಸಿದ ದಿನಾಂಕ ಮತ್ತು ಸ್ಥಳದಲ್ಲಿ ನೆರವೇರಿಸಲಾಗುವುದು. ಅಭಿರುಚಿಯುಳ್ಳ ಖರೀದಿದಾರರು ಸದರಿ ದಿನಾಂಕದಂದು ಹಾಜರಾಗಿ ಟೆಂಡರ್ ಹರಾಜಿನಲ್ಲಿ ಭಾಗವಹಿಸಲು ತಿಳಿಸಲಾಗಿದೆ. ಈ ಕೆಳಗೆ ಸಹಿ ಮಾಡಿದವರಿಗೆ ಟೆಂಡರ್ ದರಗಳು ಅತೀ ಕಡಿಮೆ ಅನಿಸಿದ್ದಲ್ಲಿ ಸದರಿ ಟೆಂಡರ್‌ದಾರರ ಎದುರಿಗೆ ಅದೇ ದಿನ ಟೆಂಡರಿನಲ್ಲಿ ಭಾಗವಹಿಸಿದವರ ಮಧ್ಯೆ ಬಹಿರಂಗ ಹರಾಜು ಕೂಡ ಮಾಡಲಾಗುವುದು.

| ಕ್ರ. ಸಂ. | ಗುನ್ನೆ ಪ್ರಕರಣದಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡ ವಾಹನದ ಸಂಖ್ಯೆ | ಹರಾಜಿನ ಸ್ಥಳ | ಹರಾಜು ದಿನಾಂಕ | ಟೆಂಡರ್‌ನಲ್ಲಿ ಭಾಗವಹಿಸಲು ಇಡುವ ಇ.ಎಮ್.ಡಿ. ಮೊತ್ತ (ರೂ.ಗಳಲ್ಲಿ) |
|---|---|---|---|---|
| 1 | 2 | 3 | 4 | 5 |
| 1 | ಆಟೋರಿಕ್ಷಾ ಎಂಇಜಡ್-6088 | ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿಯ ಆವರಣ | 30-8-2004 | 5000.00 |
| 2 | ಟಾಟಾ ಟ್ರಕ್ ಕೆಎ-30/873 | - ಸದರ - | 30-8-2004 | 10000.00 |
| 3 | ಮೆಟಾಡೋರ್ ಟೆಂಪೊ ಎಂಎಂಪಿ-1453 | - ಸದರ - | 30-8-2004 | 5000.00 |
| 4 | ಆಟೋರಿಕ್ಷಾ ಸಿಎನ್‌ಇ-6283 | - ಸದರ - | 30-8-2004 | 5000.00 |
| 5 | ಅಂಬಾಸಿಡರ್ ಕಾರ್ ಸಿಆರ್‌ಎಲ್-1158 | - ಸದರ - | 30-8-2004 | 5000.00 |

| 1 | 2 | 3 | 4 | 5 |
|---|---|---|---|---|
| 6 | ಅಶೋಕ ಲೈಲ್ಯಾಂಡ್ ಟ್ರಕ್ ಎಂಇಎಚ್-4146 | ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿಯ ಆವರಣ | 30-8-2004 | 10000.00 |
| 7 | ಮೆಟಾಡೋರ್ ಟೆಂಪೋ ಕೆಎ-25/2259 | - ಸದರ - | 30-8-2004 | 5000.00 |
| 8 | ಟ್ರಕ್ ಎಂಟಿಕ್ಯೂ-9856 | - ಸದರ - | 30-8-2004 | 10000.00 |
| 9 | ಆಟೋರಿಕ್ಷಾ ಕೆಎ-22/3485 | ಜಲದರ್ಶಿನಿ ವಿಶ್ರಾಂತಿ ಗೃಹ, ದಾಂಡೇಲಿ ರವರ ಆವರಣ | 30-8-2004 | 5000.00 |

**ಟೆಂಡರ್ ಷರತ್ತುಗಳು**

1. ಟೆಂಡರ್ ಮೇಲೆ ನಮೂದಿಸಿದಂತೆ ಪ್ರತಿ ವಾಹನಕ್ಕೆ ಒಂದರಂತೆ ಟೆಂಡರ್ ಆಹ್ವಾನಿಸಲಾಗಿದ್ದು ಪ್ರತಿ ವಾಹನಕ್ಕೂ ಪ್ರತ್ಯೇಕವಾಗಿ ಟೆಂಡರ್ ಹಾಕತಕ್ಕದ್ದು.
2. ಪ್ರತಿ ವಾಹನಕ್ಕೆ ಮೇಲಿನ ಅನುಬಂಧ 5 ರಲ್ಲಿ ನಮೂದಿಸಿದಂತೆ ಈ ಕೆಳಗೆ ಸಹಿ ಮಾಡಿದವರ ಹೆಸರಿನಲ್ಲಿ ರಾಷ್ಟ್ರೀಕೃತ ಬ್ಯಾಂಕಿನಿಂದ ಪಡೆದ ಹುಂಡಿ ಮೂಲಕ ಠೇವಣಿ ಹಣ ಪಾವತಿ ಮಾಡತಕ್ಕದ್ದು (ಹಳಿಯಾಳ ವ್ಯಾಪ್ತಿಯ ಬ್ಯಾಂಕುಗಳು)
3. ಟೆಂಡರ್‌ನಲ್ಲಿ ಯಶಸ್ವಿಯಾದ ಟೆಂಡರ್‌ದಾರರು ಅದೇ ದಿನ ಖರೀದಿ ಮೌಲ್ಯದ ಶೇಕಡಾ 50 ಹಾಗೂ ಇತರೇ ಕರದೊಂದಿಗೆ ಹಣ ಪಾವತಿಸತಕ್ಕದ್ದು ಹಾಗೂ ಟೆಂಡರ್ ದಿವಸದ ದಿನಾಂಕದಿಂದ 30 ದಿನದೊಳಗಾಗಿ ಬಾಕಿ ಶೇಕಡಾ 50 ಹಣ ಕೂಡ ಪಾವತಿ ಮಾಡಿ ವಾಹನವನ್ನು ಮುಂದಿನ 7 ದಿನಗಳಲ್ಲಿ ಸ್ವಂತ ಖರ್ಚಿನಲ್ಲಿ ರಫ್ತಿಪಡಿಸಿಕೊಳ್ಳತಕ್ಕದ್ದು. ತಪ್ಪಿದಲ್ಲಿ ಅಂಥವರ ಠೇವಣಿ ಹಣ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಅವರ ಜವಾಬ್ದಾರಿಯ ಮೇಲೆ ಮರು ಟೆಂಡರ್ ಕರೆಯಲಾಗುವುದು. ಈ ಮರು ಟೆಂಡರ್‌ನಲ್ಲಿ ಮೂಲ ಟೆಂಡರ್‌ಗಿಂತ ಕಡಿಮೆ ಟೆಂಡರ್ ದರ ಬಂದಲ್ಲಿ ಕಾನೂನು ರೀತಿ ಮೂಲ ಟೆಂಡರ್‌ದಾರರಿಂದ ಕಡಿಮೆ ಬಂದ ಹಣ ವಸೂಲು ಮಾಡಲಾಗುವುದು.
4. ಟೆಂಡರ್‌ನಲ್ಲಿ ಕಡಿಮೆ ದರ ಬಂದು ಮೇಲಾಧಿಕಾರಿಗಳಿಗೆ ಮಂಜೂರಿಗಾಗಿ ಸಲ್ಲಿಸಿದ ಟೆಂಡರ್‌ದಾರರು ಅವರಿಗೆ ಟೆಂಡರ್ ಮಂಜೂರಿ ವಿಷಯ ತಿಳಿಸಿದ ಮೂರು ದಿನಗಳಲ್ಲಿ ಟೆಂಡರ್ ಮೌಲ್ಯದ ಶೇಕಡಾ 50 ಹಣ ಪಾವತಿ ಮಾಡತಕ್ಕದ್ದು ಒಂದು ವೇಳೆ 30 ದಿನದೊಳಗಾಗಿ ಮಂಜೂರಿ ಆದೇಶ ಸ್ವೀಕೃತವಾಗದೇ ಇದ್ದಲ್ಲಿ ಈ ಕಛೇರಿಯಿಂದ ತಿಳಿಸಿದ ಮಂಜೂರಿ ಆದೇಶದ 7 ದಿನಗಳಲ್ಲಿ ಪೂರ್ತಿ ಹಣ ಪಾವತಿ ಮಾಡಿ ವಾಹನವನ್ನು ರಫ್ತಿಪಡಿಸಿಕೊಳ್ಳತಕ್ಕದ್ದು.
5. ಯಶಸ್ವಿ ಟೆಂಡರ್‌ದಾರರು ಖರೀದಿಸಿದ ವಾಹನವನ್ನು ತಮ್ಮ ಸ್ವಂತ ಖರ್ಚಿನಲ್ಲಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳಿಂದ ತಮ್ಮ ಹೆಸರಿಗೆ ವರ್ಗಾಯಿಸಿಕೊಳ್ಳತಕ್ಕದ್ದು. ಅದಕ್ಕೆ ಸಂಬಂಧಿಸಿದ ಯಾವುದೇ ದಾಖಲೆ ಬೇಕಾದಲ್ಲಿ ಈ ಕಛೇರಿಯಲ್ಲಿ ಲಭ್ಯವಿದ್ದಲ್ಲಿ ಪೂರೈಸಲಾಗುವುದು.
6. ಟೆಂಡರ್‌ದಾರರು ಒಂದೇ ಟೆಂಡರ್ ನಮೂನೆಯಲ್ಲಿ ಎರಡು ಅಥವಾ ಅದಕ್ಕಿಂತ ಹೆಚ್ಚಿಗೆ ಟೆಂಡರ್ ಹಾಕಿದಲ್ಲಿ ಅಂತಹ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.
7. ಸದರಿ ಮುಟ್ಟುಗೋಲು ವಾಹನಕ್ಕೆ ಸಂಬಂಧಿಸಿದಂತೆ ಚಾಲ್ತಿಯಲ್ಲಿರುವ ಆದಾಯ ತೆರಿಗೆ ಹಾಗೂ ವರಮಾನ ತೆರಿಗೆಗಳನ್ನು ಕೂಡ ವಸೂಲಿ ಮಾಡಲಾಗುವುದು.
8. ಟೆಂಡರ್‌ಗಳನ್ನು ನಿರ್ದಿಷ್ಟ ಮುದ್ರಿತ ಫಾರಂನಲ್ಲಿಯೇ ಕೊಡತಕ್ಕದ್ದು. ಇಂತಹ ಫಾರಂಗಳನ್ನು ಈ ಕಾರ್ಯಾಲಯದಲ್ಲಿ ಟೆಂಡರಿನ ದಿನಾಂಕದಂದು ಮಧ್ಯಾಹ್ನ 12.00 ಘಂಟೆಯವರೆಗೆ ಪ್ರತಿ ಫಾರ್ಮಿಗೆ ರೂ.500.00 (ರೂ. ಐದು ನೂರು ಮಾತ್ರ) ಮತ್ತು ಇತರೇ ಕರಗಳನ್ನು ಪಾವತಿ ಮಾಡಿ ಪಡೆಯಬಹುದು. ನಿರ್ದಿಷ್ಟ ಮುದ್ರಿತ ಫಾರ್ಮಿನಲ್ಲಿ ಅಲ್ಲದೇ ಬೇರೆ ಫಾರ್ಮಿನಲ್ಲಿ ಕೊಟ್ಟ ಟೆಂಡರ್‌ಗಳನ್ನು ಮಾನ್ಯ ಮಾಡುವುದಿಲ್ಲ. ಟೆಂಡರ್ ಫಾರ್ಮ್‌ಗಳನ್ನು ವರ್ಗಾಯಿಸಲಾಗುವುದಿಲ್ಲ.
9. ಟೆಂಡರ್ ಲಕೋಟೆಯ ಮೇಲೆ ಟೆಂಡರ್ ಯುನಿಟ್ ಸಂಖ್ಯೆಯನ್ನು ನಮೂದಿಸಿ ಅದಕ್ಕೆ ಟೆಂಡರ್ ಎಂದು ಸ್ಪಷ್ಟವಾಗಿ ಬರೆದು ಒಂದು ಲಕೋಟೆಯನ್ನು ಸೀಲ್ ಮಾಡಿ ಟೆಂಡರಿನ ದಿವಸ ಅಂದರೆ 30.8.2004 ರಂದು ಅಪರಾಹ್ನ 3.00 ಘಂಟೆಯವರೆಗೆ ಈ ಕಾರ್ಯಾಲಯದಲ್ಲಿ ಪೂರ್ವಾಹ್ನ 10.00 ಘಂಟೆಯಿಂದ ಅಪರಾಹ್ನ 3.00 ಘಂಟೆಯವರೆಗೆ ಒಂದು ಟೆಂಡರ್ ಪೆಟ್ಟಿಗೆಯನ್ನು ಇಡಲಾಗುವುದು ಅದರಲ್ಲಿಯೇ ಹಾಕತಕ್ಕದ್ದು.
10. ಯಾವುದೇ ಟೆಂಡರನ್ನು ಅಥವಾ ಎಲ್ಲಾ ಟೆಂಡರ್‌ಗಳನ್ನು ಯಾವುದೇ ಕಾರಣ ಕೊಡದೇ ಮಂಜೂರು ಮಾಡುವ ಅಥವಾ ನಿರಾಕರಿಸುವ ಅಧಿಕಾರವನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಹಳಿಯಾಳ ವಿಭಾಗ, ಹಳಿಯಾಳ ರವರು ಕಾಯ್ದಿರಿಸಿಕೊಂಡಿರುತ್ತಾರೆ.
11. ಟೆಂಡರ್‌ದಾರರು ತಮ್ಮ ಅತೀ ಹೆಚ್ಚಿನ ದರಗಳನ್ನು ಟೆಂಡರಿನಲ್ಲಿ ನಮೂದಿಸಿ ಅಂಕಿ ಹಾಗೂ ಅಕ್ಷರ ಎರಡನ್ನು ಸ್ಪಷ್ಟವಾಗಿ ನಮೂದಿಸತಕ್ಕದ್ದು.
12. ಟೆಂಡರ್‌ದಾರರು ತಮ್ಮ ಪೂರ್ಣ ಹೆಸರು, ವಯಸ್ಸು ಮತ್ತು ಸರಿಯಾದ ಅಂಚೆಯ ವಿಳಾಸ ಮುಂತಾದ ಎಲ್ಲ ಮಾಹಿತಿಯನ್ನು ಟೆಂಡರ್ ಫಾರ್ಮಿನಲ್ಲಿ ತುಂಬಿ ನಿರ್ದಿಷ್ಟ ಸ್ಥಳದಲ್ಲಿ ತಮ್ಮ ಪೂರ್ಣ ಸಹಿ ಮಾಡತಕ್ಕದ್ದು. ಟೆಂಡರ್ ಫಾರ್ಮಿನಲ್ಲಿ ಯಾವುದಾದರೂ ತಪ್ಪುಗಳಾದಲ್ಲಿ ಅಂತವುಗಳನ್ನು ಹೊಡೆದು ಹಾಕಿ ಟೆಂಡರ್‌ದಾರರು ತಮ್ಮ ಚಿಕ್ಕ ರುಜು ಹಾಕತಕ್ಕದ್ದು. ಹೀಗೆ ಮಾಡಲು ತಪ್ಪಿದಲ್ಲಿ ಅಂತಹ ಟೆಂಡರ್‌ಗಳನ್ನು ಈ ಕೆಳಗೆ ಸಹಿ ಮಾಡಿದವರ ಇಚ್ಛೆಗನುಸಾರವಾಗಿ ಅನರ್ಹಗೊಳಿಸಲಾಗುವುದು.

13. ಟೆಂಡರ್‌ದಾರರು ಮಾಡಬಹುದಾದ ಯಾವ ಷರತ್ತುಗಳನ್ನು ಅಂಗೀಕರಿಸುವುದಿಲ್ಲ.
14. ಈ ಟೆಂಡರ್ ಬಗ್ಗೆ ಯಾವುದಾದರೂ ತಂಟೆ ತಕರಾರು ಬಂದರೆ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಹಳಿಯಾಳ ವಿಭಾಗ, ಹಳಿಯಾಳ ರವರ ನಿರ್ಧಾರವೇ ಅಂತಿಮ ನಿರ್ಧಾರವಾಗಿರುತ್ತದೆ.
15. ಟೆಂಡರ್‌ಗೆ ಭಾಗವಹಿಸಲು 18 ವರ್ಷದ ಮೇಲ್ಪಟ್ಟವರಿಗೆ ಮಾತ್ರ ಅವಕಾಶವಿರುತ್ತದೆ.
16. ಯಶಸ್ವಿ ಟೆಂಡರ್‌ದಾರರೆಂದು ಮಂಜೂರಿ ಆದೇಶ ನೀಡದ ಹೊರತು ಮುಟ್ಟುಗೋಲು ಹಾಕಿಕೊಂಡ ವಾಹನಗಳ ಮೇಲೆ ಯಾವುದೇ ಹಕ್ಕು ಚಲಾಯಿಸುವಂತಿಲ್ಲ.
17. ಯಶಸ್ವಿ ಟೆಂಡರ್‌ದಾರರೆಂದು ಮಂಜೂರಾತಿ ನೀಡಿದ ಮೇಲೆ ವಾಹನ ಸಾಗಿಸುವ ಪೂರ್ವದಲ್ಲಿ ಯಾವುದೇ ಕಾರಣ ನೀಡದೇ ಅವರ ಟೆಂಡರನ್ನು ರದ್ದುಪಡಿಸುವ ಹಕ್ಕನ್ನು ಕಾಯ್ದಿರಿಸಿದೆ.
18. ಟೆಂಡರ್‌ನಲ್ಲಿ ಭಾಗವಹಿಸಿದ ಅಥವಾ ಯಶಸ್ವಿ ಟೆಂಡರುದಾರರೆಂದು ಮಂಜೂರಿ ನೀಡಿದವರು ಯಾವುದೇ ಅಪರಾಧದಲ್ಲಿ ಭಾಗವಹಿಸಿದ್ದು ಅಥವಾ ಹಿಂದೆ ಅಪರಾಧವೆಸಗಿ ಶಿಕ್ಷೆ ಅನುಭವಿಸಿದವರೆಂದು ಈ ಕೆಳಸಹಿದಾರರ ಗಮನಕ್ಕೆ ಬಂದಲ್ಲಿ ಅಂಥಹ ಟೆಂಡರನ್ನು ರದ್ದುಪಡಿಸಲಾಗುವುದು.
19. ಈ ಮೇಲಿನ ಷರತ್ತುಗಳನ್ನಲ್ಲದೇ ಈ ಪ್ರಕ್ರಿಯೆ ಪೂರ್ಣಗೊಳ್ಳುವವರೆಗೆ ಕಾಲಕಾಲಕ್ಕೆ ಅವಶ್ಯವೆನಿಸಿದ ಯಾವುದೇ ಷರತ್ತನ್ನು ವಿಧಿಸುವ ಅಥವಾ ಈ ಮೇಲಿನ ಷರತ್ತುಗಳನ್ನು ಸಡಿಲುಗೊಳಿಸುವ ಅಥವಾ ಬದಲಾವಣೆ ಮಾಡುವ ಹಕ್ಕನ್ನು ಕಾಯ್ದಿರಿಸಿದೆ.
20. ವಾಹನವನ್ನು ಸ್ಥಳದಲ್ಲಿ ಇದ್ದ ಸ್ಥಿತಿಯಲ್ಲಿಯೇ ಹರಾಜು ಮಾಡಲಾಗುವುದು.
21. ಯಶಸ್ವಿ ಟೆಂಡರ್‌ದಾರರು ವಾಹನವನ್ನು ರಫ್ತಿಪಡಿಸಲು ವಿಳಂಬವಾದಲ್ಲಿ ಬಿಡಿ ಭಾಗ ಬದಲಾಯಿಸಿದಲ್ಲಿ ಇಲಾಖೆ ಜವಾಬ್ದಾರಿಯಾಗಿರುವುದಿಲ್ಲ.
22. ಟೆಂಡರ್ ಹರಾಜಿನಲ್ಲಿ ಭಾಗವಹಿಸಿದ ಯಶಸ್ವಿಯಾದ ಟೆಂಡರ್ ಬಿಡ್‌ದಾರರು ತಮ್ಮ ತಪ್ಪು ಗ್ರಹಿಕೆಯಿಂದ ಇಲಾಖೆಗೆ ನಷ್ಟವಾಗುವ ಸಂದರ್ಭ ಉದ್ಭವಿಸಿದಲ್ಲಿ ಅಂತಹವರು ಮುಂಗಡವಾಗಿ ಪಾವತಿಸಿದ್ದ ಹಣದಲ್ಲಿ ನಷ್ಟವನ್ನು ವಸೂಲಿ ಮಾಡಿಕೊಳ್ಳುವ ಅಧಿಕಾರವನ್ನು ಕಾಯ್ದಿರಿಸಲಾಗಿದೆ. ಈ ರೀತಿ ವಸೂಲಿ ಮಾಡಲು ತೀರ್ಮಾನಿಸಿದ ಹಣವನ್ನು ಸ್ಥಳದಲ್ಲಿಯೇ ಪಾವತಿಸತಕ್ಕದ್ದು, ತಪ್ಪಿದಲ್ಲಿ ಸಂಬಂಧಪಟ್ಟವರ ವಿರುದ್ಧ ಕಾನೂನು ಕ್ರಮ ಜರುಗಿಸಲಾಗುವುದು.

**ರಾಮಚಂದ್ರ, ಭಾ.ಅ.ಸೇ.**

ಪಿ.ಆರ್. 385 ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಹಳಿಯಾಳ ವಿಭಾಗ, ಹಳಿಯಾಳ.

**ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ನಿರ್ದೇಶಕರ ಕಾರ್ಯಾಲಯ**

**ಸರ್ಕಾರಿ ಮುದ್ರಣಾಲಯ ನಂ.6/ಇ, 1ನೇ ಅಡ್ಡರಸ್ತೆ, ಕೆ.ಐ.ಎ.ಡಿ.ಬಿ. ಪೀಣ್ಯ 1ನೇ ಹಂತ, ತುಮಕೂರು ರಸ್ತೆ, ಬೆಂಗಳೂರು-560 058**

**ಬಹಿರಂಗ ಹರಾಜು ಅಧಿಸೂಚನೆ**

**ಸಂಖ್ಯೆ: ಖರೀದಿ-780/2004-05, ದಿನಾಂಕ: 13ನೇ ಆಗಸ್ಟ್ 2004**

**ವಿಷಯ:** ಸರ್ಕಾರಿ ಕೇಂದ್ರ ಮುದ್ರಣಾಲಯ ಬೆಂಗಳೂರು, ಮತ್ತು ಸರ್ಕಾರಿ ಮುದ್ರಣಾಲಯ ಪೀಣ್ಯ ಶೆಡ್, ಬೆಂಗಳೂರು ಇಲ್ಲಿ ಶೇಖರಣೆಯಾಗಿರುವ ಹಳೆಯ ಅನುಪಯುಕ್ತ ಇಂಕ್ ಡಬ್ಬಗಳು, ಪೇಸ್ಟ್ ಡಬ್ಬಗಳು, ಮರದ ತುಂಡುಗಳು ಮತ್ತು ಕಬ್ಬಿಣದ ಸ್ಕ್ರ್ಯಾಪ್ ಐಟಂಗಳನ್ನು ಬಹಿರಂಗ ಹರಾಜಿನ ಮೂಲಕ ವಿಲೇವಾರಿ ಮಾಡುವ ಬಗ್ಗೆ.

ಈ ಮೂಲಕ ಸಾರ್ವಜನಿಕರಿಗೆ / ವ್ಯಾಪಾರಿ ಸಂಸ್ಥೆಗಳಿಗೆ ತಿಳಿಯಪಡಿಸುವುದೇನೆಂದರೆ ಸರ್ಕಾರಿ ಕೇಂದ್ರ ಮುದ್ರಣಾಲಯ, ಪೀಣ್ಯ, ಬೆಂಗಳೂರು-58 ಮತ್ತು ಸರ್ಕಾರಿ ಮುದ್ರಣಾಲಯ, ಪೀಣ್ಯ ಶೆಡ್, ಬೆಂಗಳೂರು-58 ಇವರುಗಳ ಕಛೇರಿಯಲ್ಲಿ ಈ ಕೆಳಗೆ ವಿವರಿಸಿರುವ ವಸ್ತುಗಳನ್ನು ಬಹಿರಂಗ ಹರಾಜಿನ ಮೂಲಕ ಸ್ಥಳದಲ್ಲಿಯೇ ಯಾವ ರೀತಿ ಇದೆಯೋ ಅದೇ ರೀತಿ ವಿಲೇವಾರಿ ಮಾಡಲಾಗುವುದು, ಈ ಬಹಿರಂಗ ಹರಾಜಿನಲ್ಲಿ ಭಾಗವಹಿಸಿ ಬಿಡ್/ಸವಾಲು ಮಾಡುವವರನ್ನು ಆಹ್ವಾನಿಸಲಾಗಿದೆ.

1. **ಸರ್ಕಾರಿ ಕೇಂದ್ರ ಮುದ್ರಣಾಲಯ, ಪೀಣ್ಯ, ಬೆಂಗಳೂರು - 58**

| | |
|---|---|
| (ಅ) ಇಂಕ್ ಡಬ್ಬಗಳು | 300 ಸಂಖ್ಯೆ |
| (ಆ) ಪೇಸ್ಟ್ ಡಬ್ಬಗಳು | 100 ಸಂಖ್ಯೆ |
| (ಇ) ಯಂತ್ರಗಳನ್ನು ಪ್ಯಾಕ್ ಮಾಡಿದ ಮರದ ತುಂಡುಗಳು | 1/2 ಲೋಡ್ |
| (ಈ) ಕಬ್ಬಿಣದ ಸ್ಕ್ರ್ಯಾಪ್ ಐಟಂಗಳು | 1/2 ಲೋಡ್ |

2. **ಸರ್ಕಾರಿ ಮುದ್ರಣಾಲಯ, ಪೀಣ್ಯ ಶೆಡ್, ಬೆಂಗಳೂರು - 58**

| | |
|---|---|
| (ಅ) ಖಾಲಿ ಪೇಸ್ಟ್ ಡಬ್ಬಗಳು | 200 ಡಬ್ಬಗಳು |
| (ಆ) ಉಪಯೋಗವಿಲ್ಲದ ಒಡೆದಿರುವ ರ್‍ಯಾಕುಗಳು | 2 ರ್‍ಯಾಕುಗಳು |
| (ಇ) ಬೆಲ್ ಪಟ್ಟಿಗಳು | - |

**ನಿಬಂಧನೆ ಮತ್ತು ಷರತ್ತುಗಳು**

1) ಹರಾಜಿನಲ್ಲಿ ಭಾಗವಹಿಸುವ ಆಸಕ್ತ ಬಿಡ್‌ದಾರರು ಹರಾಜು ಪ್ರಾರಂಭವಾಗುವುದಕ್ಕೆ ಮೊದಲು ರೂ.5000-00 (ಐದು ಸಾವಿರ ರೂಪಾಯಿಗಳು ಮಾತ್ರ) ಈ ಕಛೇರಿಯ ನಗದು ಸಹಾಯಕರ ಬಳಿ ಮೊತ್ತವನ್ನು ನಗದು ಮೂಲಕ ಠೇವಣಿಯಿಡಬೇಕು (ಹರಾಜಿನ ನಂತರ ವಾಪಸ್ಸು ಮಾಡಲಾಗುವುದು)

2) ಹರಾಜು ದಿನಾಂಕವನ್ನು 01.09.04 ರಂದು ಬೆಳಿಗ್ಗೆ 11.00 ಘಂಟೆಗೆ ಪ್ರಾರಂಭಿಸಲಾಗುವುದು.
3) ಪ್ರತಿ ವಸ್ತುವನ್ನು ಪ್ರತ್ಯೇಕವಾಗಿ ಲಾಟ್‌ನಲ್ಲಿ ಹರಾಜು ಮಾಡಲಾಗುವುದು.
4) ಹರಾಜಿನ ವಸ್ತುಗಳನ್ನು ಪರಿಶೀಲನೆಗಾಗಿ ದಿನಾಂಕ: 23.08.2004 ರಂದು 30.08.2004 ರವರೆಗೆ ಕೆಲಸದ ದಿನಗಳಲ್ಲಿ ಪೂರ್ವಾಹ್ನ 11.00 ಘಂಟೆಯಿಂದ ಅಪರಾಹ್ನ 5.00 ಘಂಟೆಯವರೆಗೆ ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು ಈ ಕಛೇರಿಯ ಸಾಮಾನ್ಯ ಉಗ್ರಾಣದ ವಿಭಾಗದವರನ್ನು ಮತ್ತು ಮುಖ್ಯ ಸಮಯಪಾಲಕರನ್ನು ಸಂಪರ್ಕಿಸಿ ಪರಿಶೀಲಿಸಬಹುದು.
5) ಹರಾಜಿಗೆ ಸಂಬಂಧಿಸಿದಂತೆ ಇಲಾಖೆಯ ಅನುಮೋದನೆ ಪಡೆದು ತಿಳಿಸಿದ ನಂತರ ಜಯಶಾಲಿಗಳಾದ ಹರಾಜುದಾರರು ತಾವು ಬಿಡ್ ಮಾಡಿದ ಪೂರ್ಣ ಹಣವನ್ನು ತೆರಿಗೆ ಸಹಿತ ನಗದು ರೂಪದಲ್ಲಿ ಪಾವತಿ ಮಾಡುವುದು ಹಾಗೂ ಹರಾಜಾದ ವಸ್ತುಗಳನ್ನು ಹರಾಜಿನ ದಿನಾಂಕದಿಂದ ಮೂರು ದಿನಗಳೊಳಗಾಗಿ ತಮ್ಮ ಸ್ವಂತ ಖರ್ಚಿನಲ್ಲಿ ಹೇಗಿದೆಯೋ ಹಾಗೆ ತೆಗೆದುಕೊಂಡು ಹೋಗತಕ್ಕದ್ದು ತಪ್ಪಿದಲ್ಲಿ ಹರಾಜನ್ನು ತಿರಸ್ಕರಿಸಿ ಠೇವಣಿ ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು ಮತ್ತು ಸದರಿ ಐಟಂಗಳನ್ನು ಬೇರೆ ವಿಧಾನಗಳ ಮೂಲಕ ವಿಲೇವಾರಿ ಮಾಡಲಾಗುವುದು.
6) ಹರಾಜುಗಳ ಬಗ್ಗೆ ಹಾಗೂ ದರಪಟ್ಟಿಗಳನ್ನು ಯಾವ ಕಾರಣವನ್ನು ನೀಡದೇ ಒಪ್ಪುವ ಅಥವಾ ತಿರಸ್ಕರಿಸುವ ಅಧಿಕಾರ ಈ ಇಲಾಖೆಯ ನಿರ್ದೇಶಕರದಾಗಿರುತ್ತದೆ ಹಾಗೂ ಈ ವಿಚಾರದಲ್ಲಿ ಉಂಟಾದ ಯಾವುದೇ ವಿವಾದಗಳಲ್ಲಿ ಇಲಾಖೆಯ ನಿರ್ದೇಶಕರದೇ ಅಂತಿಮ ತೀರ್ಮಾನವಾಗಿರುತ್ತದೆ.

ನಿರ್ದೇಶಕರು,
ಪಿ.ಆರ್. 393 ಸರ್ಕಾರಿ ಮುದ್ರಣಾಲಯ, ಪೀಣ್ಯ, ಬೆಂಗಳೂರು.

**P.N. MAYOHALL**

**IN THE COURT OF THE IV ADDL. CITY CIVIL JUDGE, MAYOHALL, BANGALORE**

**P & S.C.NO.15018/2004**

**PETITIONER:** Smt. Rajamma Rajanna D. W/o Late Sri D. Rajanna, Hindu, aged about 47 years, R/o at No.49, Doddaiah Nilaya, Jogupalyam Main Street, Ulsoor, Bangalore-8.

**RESPONDENT:**
1. The Branch Manager, Canara Bank, Ulsoor Branch, Bangalore.
2. The Branch Manager, Syndicate Bank, Ulsoor Branch, Bangalore.
3. The Branch Manager, The Kalidasa Co-operative Bank, Gandhi Nagar, Bangalore.
4. The Branch Manager, Tamilnad Mercantile Bank Ltd., Cantonment Branch, Bangalore.

**PUBLIC NOTICE**

Notice is hereby given that a petition have been made to this court under Sec. 372 of the Indian Succession Act, for grant of succession certificate in respect of the debts and securities of the deceased **Sri D. RAJANNA,** who died on 3/12/2003 at Bangalore.

Be it known that no caveat has been entered and the said petition is posted for hearing on **1/09/2004** All persons claiming to have any interest in the Assets of the deceased may come and see the proceeding before grant of succession certificate.

Given under my hand and the seal of the Court, this the 9/8/2004.

By Order of the court,
PD-75 Asst. Registrar, City Civil Court, Mayohall unit, Bangalore.

**P.N. MAYOHALL**

**IN THE COURT OF THE IV ADDL. CITY CIVIL JUDGE, MAYOHALL, BANGALORE**

**P & S.C.NO.15020/2004**

**PETITIONER:**
1) Smt. Sarvamangala Krishnan W/o Sri M.L. Krishnan, aged about 56 years.
2) M.K. Sandeep S/o Sri M.L. Krishnan, aged about 24 years.
3) M.K. Amrutha D/o Sri M.L. Krishnan, aged about 17 years, Since Minors, Represented by her Natural Guardian and Mother Smt. Sarvamangala.
All together R/o at No.12/1, 'Srijayam' Ranga Rao Road, Shankarpuram, Bangalore-560004.

V/S

**RESPONDENT:** Nil

**PUBLIC NOTICE**

Notice is hereby given that a petition have been made to this court under Sec. 372 of the Indian Succession Act, for grant of succession certificate in respect of the debts and securities of the **Sri M.L. KRISHNAN,** who was the husband of Sarvamangala Krishnan Since M.L. Krishnan was found missing from 8/10/1994 to that effect the complaint has been lodge at Shankarpuram Police Station and the said complaint was registered as No.104/94.

Be it known that no caveat has been entered and the said petition is posted for hearing on **8/9/2004** All persons claiming to have any interest in the Assets of the missing person may come and see the proceeding before grant of succession certificate.

Given under my hand and the seal of the Court, this the 18/8/2004.

By Order of the court,

PD-76 Asst. Registrar, City Civil Court, Mayohall unit, Bangalore.

**P.N. MAYOHALL**

**IN THE COURT OF THE IV ADDL. CITY CIVIL JUDGE, MAYOHALL, BANGALORE**

**P & S.C.NO.15033/2003**

**PETITIONER:** 1) Mrs. R. Sybil Fernandes, W/o B.A. Fernandes, 49 years.

2) D.A. Fernandes, S/o late Anton Fernandes, 59 years.

B/o R/o at No.797, D-3, I stage, BDA Quarters, Austin town, Bangalore-47.

V/S

**RESPONDENT:** Nil

**PUBLIC NOTICE**

Notice is hereby given that a petition have been made to this court under Sec. 276 of the Indian Succession Act, for grant of Probate of Will Dated: 20.4.2000 executed by deceased BENJAMINVAZ who was R/o at No.1, Archbishop house, 75 Millers Road, Bangalore and died on 16.12.2002 at Bangalore.

Be it known that no caveat has been entered and the said petition is posted for hearing on **31/8/2004** All persons claiming to have any interest in the estate/securities may come and see the proceeding before grant of probate.

**SCHEDULE**

| | | |
|---|---|---|
| 1. | Movables Mentioned in the Will Valued at | Rs. 16,000.00 |
| 2. | Bank deposits B.D.R. No.573182 for a sum of | Rs. 96,526.00 |
| 3. | bank deposit FDR No.289235 for a sum of | Rs. 1,02,382.00 |
| 4. | F.D.R. No.487389 for a sum of of the catholic Syrian Bank Ltd., Bangalore. | Rs. 2,32,241.00 |

Given under my hand and the seal of the Court, this the 19/8/2004.

By Order of the court,

PD-77 Asst. Registrar, City Civil Court, Mayohall unit, Bangalore.

**KARNATAKA LAND ARMY CORPORATION LIMITED**

**O/O THE JOINT DIRECTOR, BANGALORE ZONE, BANGALORE, #1099, 10th MAIN, RPC LAYOUT, BANGALORE-560 040 SHORT TERM TENDER NOTIFICATION**

**Ref.No: CA/JD/BZ/8/KLAC/BNG/HG/2004-05, Dated: 19th August 2004**

Short Term Tenders are invited as per Section 17/2 of Karnataka Transparency Act from KPWD/ CPWD / MES / RAILWAYS approved or leading main Manufacturers / Suppliers for Supply of following items for the work of **"Providing Aluminium Composite Panel & Structural Glazing Material to Home Guard Headquarters at Ulsoor, Bangalore".**

| | | |
|---|---|---|
| 1. a) | Aluminium composite panel | Sqm 550 |
| b) | One way reflective glass | Sqm 350 |
| c) | Aluminium channels of various sizes | Kgs 6000 |
| 2. | Approximate amount put to Tender | Rs.24.00 Lakhs |
| 3. | E.M.D. amount | Rs.24,000.00 |

Tender forms will be issued from 19.08.2004 to 30.08.2004 at the Office of the Joint Director, KLAC Ltd., Bangalore Zone, Bangalore during office hours on payment of non refundable amount of Rs.2,500-00/- set in the form of Cash / Demand Draft drawn in favour of Joint Director, KLAC, Bangalore Zone. The last date for receipt of duly completed Tender documents in all respect, is upto 15.00 Hrs on 31.08.2004. Technical bid of the Tenders will be opened at 17.00 Hrs on the same day.

Further details & clarifications regarding the above may be obtained from this office during working hours.

1. Tender shall be submitted in original in prescribed form obtained from this office only.
2. EMD as shown in the tender schedule shall be remitted in the form of Demand Draft drawn in favour of Joint Director, KLAC, Bangalore Zone payable at Bangalore.
3. The rates quoted for supply of materials shall be valid for one year from the date of acceptance.

4. An attested copy of valid certificates shall be enclosed along with the tender as specified.

Tenders will be received upto 15.00 Hrs on 31.08.2004 and will be opened at 17.00 Hrs on the same day. Further datails can be obtained from the office on any working day. If the KLAC office happened to be closed on the date of receipt of tender, the tender will be opened on the next working day at the same time as mentioned above in front of the Tenderers or their representatives present.

Deputy Secretary (ADM),

PD-78 Dept. of Rural Development and Panchayat Raj,

**OFFICE OF THE STATE TENDER BULLETIN OFFICER**
**ROOM No.611, 6th FLOOR, M.S. BUILDING, BANGALORE**
**SHORT TERM TENDER BULLETIN**
**No: CMW 84 CLS 2004, Dated: 10th August 2004**

This is to bring to the notice of public that sealed tenders are invited by the Secretary, Karnataka State Co-operative Apex Bank Ltd., No.1, "Uttunga", Pampa Mahakavi Road, Chamarajapet, Bangalore-560 018 from the interested and eligible contractors for interior works at Gandhinagar Branch, Janata Bazaar Premises, K.G. Road, Bangalore.

In view of urgency of shifting the Gandhinagar Branch of the Bank to Janata Bazaar premises, it is decided to issue a short term tender notice under Rules 4(4) and 17(2) of the Karnataka Transparency in Public Procurements Rules 2000.

The interested eligible contractors may obtain Tender Document containing details of specifications, terms and conditions etc., from the Administration/Engineering Department, Karnataka State Co-operative Apex Bank Ltd., Head-office, Chamarajapet, Bangalore-560 018 on payment of Rs.1,000/- (not refundable) in cash/D.D./pay order drawn in favour of **"Secretary, Karnataka State Co-operative Apex Bank Ltd., Bangalore"** in person from 11.08.2004 to 02.09.2004 (upto 12.00 Noon).

| | | |
|---|---|---|
| 1. | Sale of tender documents | 11.08.2004 to 02.09.2004 |
| 2. | Last date/time for submission | 02.09.2004 up to 2.00 P.M. |
| 3. | Date and Time for opening Technical Bid part-I | 02.09.2004 at 4.30 P.M. |
| 4. | Date/Time of opening commercial Bid part-II | 10.09.2004 at 4.30 P.M. |
| 5. | Place of opening the tenders | Committee Room, Head Office |
| 6. | E.M.D. | Rs.11,000.00 Gandhinagar Branch |
| 7. | Security Deposit for awarded bidder | Rs.31,000.00 Gandhinagar Branch |
| 8. | Prebid Conference | 30.08.2004 Between 3.00 P.M. to 5.00 P.M. |

Two covers system of tendering (consisting of commercial bid and Technical bid) shall be followed. Tenders without E.M.D. shall be summarily rejected.

The above tender details are published as per the powers delegated under section 8 of the Karnataka Transparency in Public Procurements Act 1999.

**JOYCE SURENDRA**

PR-386 State Tender Bulletin Officer, Co-operation Department.

**ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ**
**ಕಡವು ನಿರೀಕ್ಷಕರು, ಶಿವಮೊಗ್ಗ ವಲಯ, ದ್ವಾರಕನಾಥ ಕಲಾಮಂದಿರ ಕಟ್ಟಡ, ಸಾಗರ**
**ಕಡವು ನಡೆಸುವ ಹಕ್ಕಿನ ಹರಾಜು ಪ್ರಕಟಣೆ**
**ಸಂಖ್ಯೆ: ಒಜಸಾ:ಒಪಿಎ:ಕ್ರ.ಸಂ:16:2003-04, ದಿನಾಂಕ: 9ನೇ ಆಗಸ್ಟ್ 2004**

ಈ ಮೂಲಕ ಸಾರ್ವಜನಿಕರಲ್ಲಿ ತಿಳಿಯಪಡಿಸುವುದೇನೆಂದರೆ, ಈ ಕೆಳಗೆ ನಮೂದಿಸಿದ ಕಡವುಗಳನ್ನು 2004-05ನೇ ಸಾಲಿಗೆ ತಮ್ಮ ಸ್ವಂತ ನಾವೆಯನ್ನು ಇಟ್ಟುಕೊಂಡು ಕಡವು ನಡೆಸುವ ಹಕ್ಕನ್ನು ಕೆಳಗೆ ನಮೂದಿಸಿದ ದಿನಾಂಕ: ಸಮಯ ಹಾಗೂ ಸ್ಥಳದಲ್ಲಿ ಬಹಿರಂಗ ಹರಾಜು ನಡೆಸಲಾಗುವುದು. ಈ ಹರಾಜಿನಲ್ಲಿ ಭಾಗವಹಿಸಲು ಇಚ್ಛಿಸುವವರು, ಕೆಳಗೆ ಕಾಣಿಸಿದ ಸ್ಥಳದಲ್ಲಿ ಷರತ್ತುಗಳಿಗೆ ಒಳಪಟ್ಟಿರತಕ್ಕದ್ದು.

| ಕ್ರ. ಸಂ. | ಕಡವಿನ ಹೆಸರು | ತಾಲ್ಲೂಕು ಜಿಲ್ಲೆ | ಲಿಲಾವು ಮಾರಾಟದ ಸ್ಥಳ ದಿನಾಂಕ ವೇಳೆ | ಕಡವಿನ ಗುತ್ತಿಗೆ ಅವಧಿ | ಕಡವಿನಲ್ಲಿ ಪ್ರಯಾಣಿಕ ರಿಂದ ಅಕರಿಸುವ ಹಾಸಲು ದರ | ಲಿಲಾವು ಸಮಯದಲ್ಲಿ ಇಡಬೇಕಾದ ಭದ್ರತಾ ಠೇವಣಿ | ಪ್ರಾರಂಭಿಕ ಸರ್ಕಾರಿ ಸವಾಲು ಮೊತ್ತ |
|---|---|---|---|---|---|---|---|
| 1 | ತಡಗಳಲೆ ಕುಡಗುಂಜಿ | ಸಾಗರ (ತಾ) ಶಿವಮೊಗ್ಗ ಜಿಲ್ಲೆ | ಕಡವು ನಿರೀಕ್ಷಕರ ಕಛೇರಿ ದ್ವಾರಕನಾಥ ಕಲಾಮಂದಿರ ಕಟ್ಟಡ ಸಾಗರ ದಿ: 3.9.04ರ 12.00 ಗಂಟೆಗೆ | 10.9.2004 ರಿಂದ 31.3.2005ರ ವರೆಗೆ | 1-00 | 100-00 | 1750-00 |

**ಕಡವು ಹರಾಜಿನ ಷರತ್ತುಗಳು**

1. ಕಡವಿನ ಸೇವೆಗೆ ಬಳಸುವ ನಾವೆಯ ಸಾಮರ್ಥ್ಯಕ್ಕನುಗುಣವಾಗಿ ಪ್ರಯಾಣಿಕರ ಜೀವ ವಿಮೆ ಮಾಡಿಸತಕ್ಕದ್ದು.
2. ಕಡವು ಹರಾಜಿನಲ್ಲಿ ಭಾಗವಹಿಸಲು ಇಚ್ಛಿಸುವ ಸ್ಪರ್ಧಿಗಳು ಹರಾಜು ನಡೆಸುವ ಅಧಿಕಾರಿಯವರೊಡನೆ ಹರಾಜು ಪ್ರಾರಂಭಿಸುವ ಮೊದಲು ಪ್ರಕಟಣೆಯಲ್ಲಿ ತಿಳಿಸಿರುವ ಹಣವನ್ನು ಠೇವಣಿಯಾಗಿ ಇಡತಕ್ಕದ್ದು.
3. ಹರಾಜಿನಲ್ಲಿ ಗೆದ್ದವರ ಠೇವಣಿಯನ್ನು ಅವರಿಂದ ಪಾವತಿಸಲು ಇರುವ ಸವಾಲು ಮೊತ್ತದ ಹಣಕ್ಕೆ ವಜಾ ಮಾಡಲಾಗುವುದು. ಉಳಿದವರಿಗೆ ಹರಾಜು ಮುಗಿದ ಕೂಡಲೇ ಹಣ ವಾಪಸ್ಸು ಮಾಡಲಾಗುವುದು.
4. ಬಹಿರಂಗ ಹರಾಜಿನಲ್ಲಿ ಭಾಗವಹಿಸಿ ಯಶಸ್ವಿಯಾದ ಗರಿಷ್ಠ ಮೊತ್ತದ ಸವಾಲುದಾರನು ಸಂಪೂರ್ಣ ಹಣವನ್ನು ಏಕಗಂಟಿನಲ್ಲಿ ಕೂಡಲೇ ಪಾವತಿ ಮಾಡಲು ಸಮರ್ಥರಿರಬೇಕು.
5. ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖಾ ನಿರ್ದೇಶಕರ ವಿವೇಚನೆಗೊಳಪಟ್ಟು ಕಂತುಗಳನ್ನು ನೀಡಿದಲ್ಲಿ ಸೂಕ್ತ ಬ್ಯಾಂಕ್ ಗ್ಯಾರಂಟಿಯನ್ನು ನೀಡತಕ್ಕದ್ದು.
6. ಬಹಿರಂಗ ಹರಾಜಿನಲ್ಲಿ ಸವಾಲಿನಲ್ಲಿ ಬೇಡಿದ ಗರಿಷ್ಠ ಮೊತ್ತದ ಶೇ.10 ರಷ್ಟನ್ನು ಕನಿಷ್ಠ ರೂ.50.00ನ್ನು ಭದ್ರತಾ ಠೇವಣಿಯಾಗಿ ಪ್ರತ್ಯೇಕವಾಗಿ ಒಂದೇ ಗಂಟಿನಲ್ಲಿ ಲಿಲಾವಿನ ಸ್ಥಳದಲ್ಲಿ ಪಾವತಿ ಮಾಡತಕ್ಕದ್ದು.
7. ಹರಾಜಿನಲ್ಲಿ ಸಮಾಧಾನಕರ ಬೇಡಿಕೆ ಬಂದಲ್ಲಿ ಕಡವು ನಡೆಸುವ ಹಕ್ಕಿನ ಅವಧಿಯನ್ನು ಒಂದು ವರ್ಷದ ಬದಲಿಗೆ ಎರಡು ವರ್ಷಕ್ಕೆ ಸಹ ಲಿಲಾವು ಸ್ಥಳದಲ್ಲಿಯೇ ನಿರ್ಧರಿಸಲಾಗುವುದು.
8. ಇಂತಹ ಸಂದರ್ಭದಲ್ಲಿ ಎರಡು ವರ್ಷದ ಬೇಡಿಕೆಯ ಮೊತ್ತವನ್ನು ಒಂದೇ ಗಂಟಿನಲ್ಲಿ ಅಥವಾ ಸೂಕ್ತ ಬ್ಯಾಂಕ್ ಗ್ಯಾರಂಟಿ ನೀಡಿದ್ದಲ್ಲಿ ಎರಡನೇ ವರ್ಷದ ಹಣವನ್ನು ಪ್ರತ್ಯೇಕ ಕಂತಿನಲ್ಲಿ ತುಂಬಲು ಅವಕಾಶ ನೀಡಲಾಗುವುದು. ಇದು ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖಾ ನಿರ್ದೇಶಕರ ವಿವೇಚನೆಗೆ ಒಳಪಟ್ಟಿದೆ.
9. ಹರಾಜಿನಲ್ಲಿ ಗೆದ್ದವರು ಹರಾಜಿನ ಹಣವನ್ನು ತಕ್ಷಣ ಪಾವತಿ ಮಾಡತಕ್ಕದ್ದು. ಅಥವಾ ಬ್ಯಾಂಕ್ ಗ್ಯಾರಂಟಿ ಪತ್ರ ನೀಡತಕ್ಕದ್ದು. ಇದಕ್ಕೆ ತಪ್ಪಿದ್ದಲ್ಲಿ ಅವರು ಕಟ್ಟಿದ ಠೇವಣಿಯನ್ನು ಕಳೆದುಕೊಳ್ಳುವರು ಅಂತಹ ತಪ್ಪಿತಸ್ಥರ ಸವಾಲುಗಾರರು ಪುನಃ ಸವಾಲಿನಲ್ಲಿ ಭಾಗವಹಿಸುವ ಹಕ್ಕನ್ನು ಕಳೆದುಕೊಳ್ಳುತ್ತಾನೆ.
10. ಹರಾಜಿನಲ್ಲಿ ಗೆದ್ದವರು ರೂ.15.00 ಸ್ಟ್ಯಾಂಪ್ ಕಾಗದದ ಮೇಲೆ ಅವರ ಖರ್ಚಿನಲ್ಲೇ ಕರಾರು ಪತ್ರವನ್ನು ಬರೆದುಕೊಟ್ಟ ನಂತರ ಕಡವನ್ನು ವಹಿಸಿಕೊಡಲಾಗುವುದು. ಅಥವಾ ಕಡವು ನಡೆಸುವ ಅನುಮತಿ ನೀಡಲಾಗುವುದು.
11. ಕಡವು ಸೇವೆಗೆ ಉಪಯೋಗಿಸುವ ದೋಣಿಯನ್ನು ಕಡವು ಸೇವೆಗೆ ತೊಡಗಿಸುವ ಮೊದಲು ಕಡವು ನಿರೀಕ್ಷಕರ ಅಧಿಕಾರಿಗಳ ತಪಾಸಣೆಗೆ ಒಳಪಡಿಸಿ ಸರ್ಕಾರದ ನಿಯಮಾನುಸಾರ ಲೈಸೆನ್ಸ್ ಪಡೆಯಬೇಕು.
12. ನಾವೆಗೆ ಅಗತ್ಯವಾದ ಜೀವ ರಕ್ಷಕ ಸಾಮಗ್ರಿಗಳನ್ನು ಒದಗಿಸತಕ್ಕದ್ದು.
13. ಕಡವಿನಲ್ಲಿ ವಸೂಲು ಮಾಡುವ ಹಾಸಲು ದರಗಳ ಸೂಚನಾ ಫಲಕಗಳನ್ನು ಕಡವು ನಡೆಸುವ ಸ್ಥಳದಲ್ಲಿ ಬಹಿರಂಗವಾಗಿ ಪ್ರಕಟಿಸತಕ್ಕದ್ದು.
14. ಕಡವು ಸರ್ಕಾರದ ಕರಾರು ಒಪ್ಪಂದದ ನಿಯಮಗಳಿಗೆ ಅನುಸಾರವಾಗಿ ನಡೆಸತಕ್ಕದ್ದು. ಇದಕ್ಕೆ ತಪ್ಪಿದ್ದಲ್ಲಿ ಹರಾಜಿನಲ್ಲಿ ಗೆದ್ದವರು ಪಡೆದ ಹಕ್ಕನ್ನು ಮತ್ತು ಕಟ್ಟಿದ ಹಣವನ್ನು ಕಳೆದುಕೊಳ್ಳುವರು. ಇದರಿಂದಾಗಿ ಸರ್ಕಾರಕ್ಕೆ ಆಗುವ ನಷ್ಟಕ್ಕೆ ಅವರೇ ಜವಾಬ್ದಾರರಾಗಿರುತ್ತಾರೆ.
15. ಗುತ್ತಿಗೆದಾರರು ಪ್ರತಿ ತಿಂಗಳು ಕಡವಿನಲ್ಲಿ ಸಾಗಿಸಲಾದ ಪ್ರಯಾಣಿಕರ ಸರಕುಗಳ ಅಂಕಿಅಂಶಗಳನ್ನು ತಪ್ಪದೇ ಕಡವು ನಿರೀಕ್ಷಕರಿಗೆ ಒಪ್ಪಿಸತಕ್ಕದ್ದು.
16. ಒಂದು ವೇಳೆ ಮೇಲಿನ ಷರತ್ತುಗಳನ್ನು ಪಾಲಿಸುವಲ್ಲಿ ಸ್ಪರ್ಧಿಗಳು ಅಸಮರ್ಥರಾದಲ್ಲಿ ಲಿಲಾವನ್ನು ಕೂಡಲೇ ರದ್ದುಪಡಿಸಿ ಪುನಃ ಲಿಲಾವು ಮಾಡಲಾಗುವುದು ಇದರಿಂದ ಸರ್ಕಾರಕ್ಕೆ ನಷ್ಟವಾದಲ್ಲಿ ಅವರನ್ನೇ ಜವಾಬ್ದಾರರನ್ನಾಗಿ ಮಾಡಲಾಗುವುದು.
17. ಹರಾಜು ಮಾರಾಟವನ್ನು ಖಾಯಂಗೊಳಿಸುವ ಅಥವಾ ತಿರಸ್ಕರಿಸುವ ಅಧಿಕಾರವು ಕರ್ನಾಟಕ ರಾಜ್ಯದ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆಯ ನಿರ್ದೇಶಕರಿಗೆ ಸೇರಿರುತ್ತದೆ.

**ಎನ್.ಎಂ. ನಾರಾಯಣಸ್ವಾಮಿ**

ಪಿ.ಆರ್. 387 ಕಡವು ನಿರೀಕ್ಷಕರು, ಶಿವಮೊಗ್ಗ ವಲಯ, ಸಾಗರ.

**KARNATAKA PUBLIC SERVICE COMMISSION , 'PARK HOUSE ' BANGALORE - 1**

**NOTIFICATION No. PSC 08 RTB 03, Dated : 18th August 2004**

In pursuance of this Office Notification No. PSC 01 RTB1(CE) 2003 dated: 06/09/2003, the provisional select list of candidates selected for 13 posts of Asst. Director of Information in the Department of Information on the basis of their performance in the competitive examination held on 04/01/2004 in accordance with the Karnataka Civil Services (Direct Recruitment by Competitive Examinations)(General) Rules 2001, was published vide notification of even number dated 02/07/2004 inviting objections, if any, from candidates like to be affected within 30 days of its publication. The objections received have been considered and the final select list prepared under rule 6 of the said Rules is as hereunder:-

Appointing Authority : Government
Name of the Department : Information

| SL.NO. | NAME OF THE CANDIDATE | REG.NO. | D_O_B | RESVN. |
|---|---|---|---|---|
| 1 | ARAVINDA GOWDA<br>NO-119/5 2-CROSS NEXT TO SKY- LINE APARTMENTS MARUTHINAGAR NAGARBAVI 2-STG BANGALORE-560074 | 1050 | 2/05/75 | GM |
| 2 | VEERANNA KAMMAR<br>SRIMATHA NO.5AC 944 I-PHASE HRBR LAYOUT NEAR WATER TANK KALYANANAGAR BANGALORE - 560043 | 1032 | 30/09/74 | GM |
| 3 | ANUPAMA G S<br>NO.619 SRILAKSHMINAGESH NILAYA II-CROSS VII-BLOCK II-PHASE BSK III-STAGE BANGALORE 560085 | 1023 | 17/07/75 | GM/W |
| 4 | SAHANA M<br>C/O P P KAVALUR KRIPAKUNJA PRASHANTH COLONY VIDYANAGAR HUBLI - 580021 | 1002 | 03/12/76 | GM/W |
| 5 | PALLAVI HONNAPURA<br>NO.402 I-MAIN 2-BLOCK HBR LAYOUT BRINDAVAN NAGAR BANGALORE - 560043 | 1031 | 30/07/79 | SC |
| 6 | SHANKARAPPA S<br>MADAPURA MAYAGANAHALLI PO RAMANAGARAM TQ BANGALORE RURAL DIST - 562128 | 1052 | 22/06/72 | 2A |
| 7 | SHAFISADUDDIN<br>"SHAFISADANA" NEKKILADY UPPINANGADY PUTTUR - 574225 | 1019 | 12/01/78 | 2B |
| 8 | VINOD CHANDRA<br>SHETTIGANAHALLY SHANIVARASANTE POST SOMVARAPET TQ KODAGU DIST | 1010 | 06/01/78 | GM/RL |
| 9 | NAVEEN C R<br>S/O L RAJAIAH NAVEENA NILAYA JANATA QTRS FORT ARKALGUD HASSAN DIST - 573102 | 1018 | 12/03/76 | SC |
| 10 | ROOPA C<br>C/O ANANDAKUMAR NO-20 DEFENCE SCIENTISTS COLONY KAGGADASAPUR EXTEN CV RAMAN NAGAR BLORE 560093 | 1037 | 02/05/73 | 2A/W |
| 11 | ROHINI K<br>MANASA 179 2-CROSS I-PHASE BALAJI KRUPA LAYOUT ARABIC COLLEGE PO RK HEGDE NAGAR BNG - 560045 | 1026 | 20/05/74 | GM/RL |
| 12 | SRINIVASA H<br>KANAJANAHALLY POST HIRIYUR TQ CHITRADURGA DIST 577546 | 1009 | 06/04/78 | ST |
| 13 | MAMATHA M R<br>MUGULUVALLY MUGULUVALLY POST CHIKKAMAGALUR TQ AND DIST | 1007 | 06/03/77 | 1 |

**NOTE:** The selection of all Candidates in this list is subject to the final decision of the Hon'ble Supreme Court of India in W A(Civil)232/99 relating to women reservation,and the final decision of the Hon'ble High Court of Karnataka/KAT in W P No 32-35/2004; Appln Nos 29-30/04; 10/04;9334/2003 and 9392-93/2003

**B.S. RAMAPRASAD**
Secretary,
Karnataka Public Service Commission.

PR-404

**FORM - 1**
**(See Rule 9)**
**POLICE DEPARTMENT**
**OFFICE OF THE DIRECTOR GENERAL OF POLICE, COD, TRAINING, SPECIAL UNITS & ECONOMIC OFFENCES, CARLTON HOUSE, PALACE ROAD, BANGALORE-560 001**
**NOTIFICATION**
**Dated: 2nd July 2004**

**SHRI BHASKAR VOKKALIGA B.** Working as **Police Inspector** in the Police Department of Office of the **DGP, COD, Trg. Spl. Units and Economic Offences, Carlton House, Palace Road, Bangalore - 560 001** is permitted to change his Name to **BHASKAR V.B.**

PD. 144 Deputy Inspector General of Police, C.O.D. Bangalore.

**ನೋಂದಣಿ ಮತ್ತು ಮುದ್ರಾಂಕ ಇಲಾಖೆ**
**ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರು, ಕಾವೇರಿ ಭವನ, 7ನೇ ಮಹಡಿ, ಜಲಮಂಡಳಿ ಕಟ್ಟಡ, ಬೆಂಗಳೂರು ಇವರ ನಡವಳಿಗಳು**

**ವಿಷಯ:** ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಪ್ರಥಮ ದರ್ಜೆ ಸಹಾಯಕರ ಬ್ಯಾಕ್‌ಲಾಗ್ ಹುದ್ದೆಯಲ್ಲಿ ನೇರ ನೇಮಕಾತಿ ಮೂಲಕ ಪ್ರಥಮ ದರ್ಜೆ ಸಹಾಯಕರೆಂದು ನೇಮಕಗೊಂಡ ಶ್ರೀ ನಾಗರಾಜ ಟಿ. ಬಿನ್ ತಿರುಮಲಪ್ಪ ಹೆಚ್. ಕುರುಬರ ಬೀದಿ, ಹೊಳಲ್ಕೆರೆ ಇವರ ನೇಮಕಾತಿ ಆದೇಶವನ್ನು ರದ್ದುಪಡಿಸುವ ಬಗ್ಗೆ.

**ಉಲ್ಲೇಖ:**
1 ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 13 ಎಸ್‌ಬಿಸಿ 2001, ದಿನಾಂಕ: 21.11.2001 ರನ್ವಯ ಪ್ರಕಟಿಸಿರುವ ಕೆ.ಸಿ.ಎಸ್. (ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರಿಗೆ ಮೀಸಲಿಟ್ಟು ತುಂಬದೇ ಇರುವ ಹುದ್ದೆಗಳ) ವಿಶೇಷ ನೇಮಕಾತಿ ನಿಯಮಗಳು 2001.
2. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 6 ಸೆನೆನಿ 2001, ದಿನಾಂಕ: 13.02.2001.
3. ಸರ್ಕಾರದ ಅಧಿಸೂಚನೆ ಸಂಖ್ಯೆ: ಎಸ್‌ಡಬ್ಲ್ಯೂಡಿ 132 ಎಸ್‌ಎಡಿ 97, ದಿನಾಂಕ: 08.02.2000.
4. ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 13 ಎಸ್‌ಬಿಸಿ 2001, ದಿನಾಂಕ: 01.06.2002 (ದಿನಾಂಕ: 14.06.2002 ರಂದು ವಿಶೇಷ ರಾಜ್ಯ ಪತ್ರದಲ್ಲಿ ಪ್ರಕಟವಾಗಿದೆ).
5. ಈ ಕಛೇರಿಯ ಸಮಸಂಖ್ಯೆ ಅಧಿಸೂಚನೆ ದಿನಾಂಕ: 30.01.2002 (ದಿನಾಂಕ: 14.02.2002 ರಂದು ರಾಜ್ಯ ಪತ್ರದಲ್ಲಿ ಪ್ರಕಟವಾಗಿದೆ).
6. ಈ ಕಛೇರಿಯ ಸಮಸಂಖ್ಯೆ ಅಂತಿಮ ಆಯ್ಕೆ ಪಟ್ಟಿ ದಿನಾಂಕ: 24.11.2003.
7. ಈ ಕಛೇರಿಯ ಸಮಸಂಖ್ಯೆ ನೇಮಕಾತಿ ಆದೇಶ ದಿನಾಂಕ: 05.12.2003.
8. ಈ ಕಛೇರಿಯ ಸಮಸಂಖ್ಯೆ ರದ್ದತಿ ಆದೇಶ ದಿನಾಂಕ: 9.1.2004.
9. ಈ ಕಛೇರಿಯ ಸಮಸಂಖ್ಯೆ ನೇಮಕಾತಿ ಆದೇಶ ದಿನಾಂಕ: 31.5.2004.

**ಪ್ರಸ್ತಾವನೆ:**

ನೋಂದಣಿ ಮತ್ತು ಮುದ್ರಾಂಕ ಇಲಾಖೆಯಲ್ಲಿ ಗುರುತಿಸಲ್ಪಟ್ಟ ಪರಿಶಿಷ್ಟ ಜಾತಿಯ ಮೂರು ಪ್ರಥಮ ದರ್ಜೆ ಸಹಾಯಕರ ಬ್ಯಾಕ್‌ಲಾಗ್ ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ತುಂಬುವುದಕ್ಕಾಗಿ ಉಲ್ಲೇಖ (1) ಮತ್ತು (2) ರನ್ವಯ ಪ್ರಕಟಿಸಿದ ಬ್ಯಾಕ್‌ಲಾಗ್ ನಿಯಮಗಳ ಪ್ರಕಾರ ಉಲ್ಲೇಖ (5)ರ ಈ ಕಛೇರಿಯ ದಿನಾಂಕ: 30.01.2002ರ ಅಧಿಸೂಚನೆಯಲ್ಲಿ ಪರಿಶಿಷ್ಟ ಜಾತಿ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಕರೆಯಲಾಗಿತ್ತು.

ಸದರಿ ಅಧಿಸೂಚನೆಗೆ ಅನುಗುಣವಾಗಿ ಬಂದ ಅರ್ಜಿಗಳನ್ನು ನಿಯಮಾನುಸಾರ ಪರಿಶೀಲಿಸಿ, ಅವುಗಳ ಪೈಕಿ ಉಲ್ಲೇಖ (1)ರ ಬ್ಯಾಂಕ್‌ಲಾಗ್ ನಿಯಮಗಳ ಪ್ರಕಾರ 29 ರಿಂದ 40 ವರ್ಷ ವಯೋಮಿತಿಯಲ್ಲಿರುವ ಪರಿಶಿಷ್ಟ ಜಾತಿಯ ಅಭ್ಯರ್ಥಿಗಳ ಪೈಕಿ ಪ್ರಥಮ ದರ್ಜೆ ಸಹಾಯಕರ ಹುದ್ದೆಗೆ ನಿಗದಿಪಡಿಸಿದ ವಿದ್ಯಾರ್ಹತೆಯಲ್ಲಿ ಹೆಚ್ಚು ಅಂಕಗಳಿಸಿದ ಮೂರು ಅರ್ಹ ಅಭ್ಯರ್ಥಿಗಳನ್ನು (Merit) ಅರ್ಹತೆಯ ಆಧಾರದ ಮೇಲೆ ಮೀಸಲಾತಿಗೆ ಅನುಗುಣವಾಗಿ ಪ್ರಥಮ ದರ್ಜೆ ಸಹಾಯಕರೆಂದು ಅಂತಿಮವಾಗಿ ಆಯ್ಕೆ ಮಾಡಿ ಉಲ್ಲೇಖ (6) ರನ್ವಯ ಅಂತಿಮ ಆಯ್ಕೆ ಪಟ್ಟಿಯನ್ನು ನಿಯಮಾನುಸಾರ ದಿನಾಂಕ: 24.11.2003 ರಂದು ಪ್ರಕಟಿಸಲಾಯಿತು.

ಪರಿಶಿಷ್ಟ ಜಾತಿಯ ಮೂರು ಬ್ಯಾಕ್‌ಲಾಗ್ ಹುದ್ದೆಗಳಲ್ಲಿ ಒಂದು ಹುದ್ದೆಯನ್ನು ಗ್ರಾಮೀಣ ಅಭ್ಯರ್ಥಿಗೆ ಮೀಸಲಿಟ್ಟಿದ್ದರಿಂದ ಸದರಿ ಅಂತಿಮ ಆಯ್ಕೆಯ ಮುಖ್ಯ ಪಟ್ಟಿಯಲ್ಲಿ ಗ್ರಾಮೀಣ ಅಭ್ಯರ್ಥಿಗಳ ಮೀಸಲಾತಿ ಅಡಿಯಲ್ಲಿ ಆಯ್ಕೆಯಾದ ಶ್ರೀ ಶಂಕರಪ್ಪ ಡೊಳ್ಳಿನ ಬಿನ್ ರಾವತಪ್ಪ ಮು: ಪೋಸ್ಟ್, ಮಣ್ಣೂರ ಇವರನ್ನು ದಿನಾಂಕ: 5.12.2003ರ ಈ ಕಛೇರಿಯ ಸಮಸಂಖ್ಯೆ ಆದೇಶದಲ್ಲಿ ಪ್ರಥಮ ದರ್ಜೆ ಸಹಾಯಕರೆಂದು ನೇಮಕ ಮಾಡಿ ಅವರನ್ನು ನೋಂದಣಿ ಮಹಾಪರಿವೀಕ್ಷಕರು ಮತ್ತು ಮುದ್ರಾಂಕಗಳ ಆಯುಕ್ತರವರ ಕಛೇರಿ, ಕಾವೇರಿ ಭವನ, 7ನೇ ಮಹಡಿ, ಜಲಮಂಡಳಿ ಕಟ್ಟಡ, ಬೆಂಗಳೂರು ಇಲ್ಲಿಗೆ ಸ್ಥಳ ನಿಯುಕ್ತಿ ಮಾಡಿ ಸದರಿ ಕಛೇರಿಯಲ್ಲಿ ಕೆಲಸಕ್ಕೆ ಹಾಜರಾಗುವಂತೆ ಸೂಚಿಸಿ, ಸದರಿ ನೇಮಕಾತಿ ಆದೇಶವನ್ನು RPAD ಮೂಲಕ ಅಭ್ಯರ್ಥಿಗೆ ಕಳುಹಿಸಲಾಗಿತ್ತು.

ಸದರಿ ಅಭ್ಯರ್ಥಿಯು ದಿನಾಂಕ: 05.12.2003ರ ಈ ಕಛೇರಿಯ ಉಲ್ಲೇಖ (7)ರ ನೇಮಕಾತಿ ಆದೇಶವನ್ನು ದಿನಾಂಕ: 19.12.2003 ರಂದು ಸ್ವೀಕರಿಸಿದ್ದರೂ ಸಹ ಸದರಿಯವರು ಕೆಲಸಕ್ಕೆ ಹಾಜರಾಗಲು ನೀಡಿದ ಹದಿನೈದು ದಿನಗಳೊಳಗಾಗಿ ಸದರಿ ಕಛೇರಿಯಲ್ಲಿ ಕೆಲಸಕ್ಕೆ ಹಾಜರಾಗದೇ ಇದ್ದುದರಿಂದ ಉಲ್ಲೇಖ (7) ರನ್ವಯ ದಿನಾಂಕ: 5.12.2003 ರಂದು ಇವರನ್ನು ಪ್ರಥಮ ದರ್ಜೆ ಸಹಾಯಕರೆಂದು ನೇಮಕ ಮಾಡಿದ ಈ ಕಛೇರಿಯ ನೇಮಕಾತಿ ಆದೇಶವನ್ನು ಉಲ್ಲೇಖ (8) ರನ್ವಯ ದಿನಾಂಕ: 9.1.2004 ರಂದು ರದ್ದುಪಡಿಸಲಾಯಿತು ಹಾಗೂ ಸದರಿ ರದ್ದತಿ ಆದೇಶವನ್ನು RPAD ಮೂಲಕ ಸದರಿ ಅಭ್ಯರ್ಥಿಗೆ ಕಳುಹಿಸಲಾಯಿತು.

ಈ ರೀತಿ ಗ್ರಾಮೀಣ ಅಭ್ಯರ್ಥಿಯಾದ ಮೇಲ್ಕಂಡ ಶ್ರೀ ಶಂಕರಪ್ಪ ಡೊಳ್ಳಿನ ಇವರು ಗ್ರಾಮೀಣ ಅಭ್ಯರ್ಥಿಗೆ ಮೀಸಲಿಟ್ಟ ಪರಿಶಿಷ್ಟ ಜಾತಿಯ ಬ್ಯಾಕ್‌ಲಾಗ್ ಹುದ್ದೆಯಲ್ಲಿ ಪ್ರಥಮ ದರ್ಜೆ ಸಹಾಯಕರೆಂದು ಕೆಲಸಕ್ಕೆ ಹಾಜರಾಗದ ಕಾರಣ ಇವರ ಬದಲಿಗೆ ಉಲ್ಲೇಖ (6) ರನ್ವಯ ದಿನಾಂಕ: 24.11.2003 ರಂದು ಪ್ರಕಟಿಸಿದ ಅಂತಿಮ ಆಯ್ಕೆಯ ಹೆಚ್ಚುವರಿ ಪಟ್ಟಿಯಲ್ಲಿ ಗ್ರಾಮೀಣ ಮೀಸಲಾತಿ ಅಡಿಯಲ್ಲಿ ಆಯ್ಕೆಯಾದ ಕೆಳಕಂಡ ಅಭ್ಯರ್ಥಿಯನ್ನು ಈ ಕಛೇರಿಯ ದಿನಾಂಕ: 31.5.2004ರ ಸಮಸಂಖ್ಯೆ ನೇಮಕಾತಿ ಆದೇಶದಲ್ಲಿ ಪ್ರಥಮ ದರ್ಜೆ ಸಹಾಯಕರೆಂದು ಅದೇ ಮೀಸಲಾತಿ ಅಡಿಯಲ್ಲಿ ನೇಮಕ ಮಾಡಿ ಇವರನ್ನು ಇವರ ಹೆಸರಿನ ಮುಂದೆ ಸೂಚಿಸಿದ ಕಛೇರಿಗೆ ಸ್ಥಳ ನಿಯುಕ್ತಿ ಮಾಡಿ ಸದರಿ ನೇಮಕಾತಿ ಆದೇಶವನ್ನು RPAD ಮೂಲಕ ಕೆಳಕಂಡ ಅಭ್ಯರ್ಥಿಗೆ ಕಳುಹಿಸಿ, ಸದರಿ ನೇಮಕಾತಿ ಆದೇಶವು ಮುಟ್ಟಿದ ದಿನಾಂಕದಿಂದ ಹದಿನೈದು (15) ದಿನಗಳೊಳಗಾಗಿ ನಿಯುಕ್ತಿಗೊಳಿಸಿದ ಕಛೇರಿಯಲ್ಲಿ ಕೆಲಸಕ್ಕೆ ಹಾಜರಾಗುವಂತೆ ಸೂಚಿಸಲಾಗಿತ್ತು.

| ಕ್ರ. ಸಂ. | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | ಜನ್ಮ ದಿನಾಂಕ | 16.03.2002ರ ದಿನಾಂಕಕ್ಕೆ ಅಭ್ಯರ್ಥಿಯ ವಯಸ್ಸು ವ - ತಿಂ - ದಿ | ವಿದ್ಯಾರ್ಹತೆ ಮತ್ತು ಶೇಕಡಾವಾರು ಅಂಕಗಳು | ಅಭ್ಯರ್ಥಿಯನ್ನು ನೇಮಕ ಮಾಡಿ ಸ್ಥಳ ನಿಯುಕ್ತಿಗೊಳಿಸಿದ ಕಛೇರಿ ಹೆಸರು | ಯಾವ ಮೀಸಲಾತಿಯಲ್ಲಿ ಮತ್ತು ಯಾವ ವರ್ಗೀಕರಣದ ಅಡಿಯಲ್ಲಿ ನೇಮಕ ಮಾಡಿ ಕೊಳ್ಳಲಾಗಿದೆಯೋ ಅದರ ವಿವರ |
|---|---|---|---|---|---|---|
| 1 | ಶ್ರೀ ನಾಗರಾಜ ಟಿ. ಬಿನ್ ತಿರುಮಲಪ್ಪ ಹೆಚ್. ಬೀರಲಿಂಗೇಶ್ವರ ದೇವಸ್ಥಾನದ ಹತ್ತಿರ, ಕುರುಬರ ಬೀದಿ, ಹೊಳಲ್ಕೆರೆ-577526 | 20.05.1970 | 31.09.26 | B.Sc., (Agri) 75.100 | ರಿಜಿಸ್ಟ್ರಾರ್ ಕಛೇರಿ ಕೇಂದ್ರೀಯ ಅಭಿಲೇಖಾಲಯ ನಂ.29, ರಿಸಲ್ದಾರ್ ರಸ್ತೆ, ಶೇಷಾದ್ರಿ ಪುರಂ ಬೆಂಗಳೂರು- 560020 | ಪರಿಶಿಷ್ಟ ಜಾತಿ ಹೆಚ್ಚುವರಿ ಪಟ್ಟಿ ಗ್ರಾಮೀಣ ಅಭ್ಯರ್ಥಿ |

ಮೇಲ್ಕಂಡ ಅಭ್ಯರ್ಥಿಯು ದಿನಾಂಕ: 31.5.2004ರ ಈ ಕಛೇರಿಯ ಉಲ್ಲೇಖ (9)ರ ನೇಮಕಾತಿ ಆದೇಶವನ್ನು ದಿನಾಂಕ: 10.6.2004 ರಂದು ಸ್ವೀಕರಿಸಿರುವುದರಿಂದ ಇವರು ದಿನಾಂಕ: 25.6.2004 ರೊಳಗೆ ಕೆಲಸಕ್ಕೆ ಹಾಜರಾಗಬೇಕಾಗಿತ್ತು. ಆದರೆ ಸದರಿಯವರು ಈ ತಹಲ್‌ವರೆವಿಗೂ ಮೇಲ್ಕಂಡ ಕಛೇರಿಯಲ್ಲಿ ಕೆಲಸಕ್ಕೆ ಹಾಜರಾಗಿರುವುದಿಲ್ಲವೆಂದು ರಿಜಿಸ್ಟ್ರಾರ್, ಕೇಂದ್ರೀಯ ಅಭಿಲೇಖಾಲಯ, ಶೇಷಾದ್ರಿ ಪುರಂ, ಬೆಂಗಳೂರು ಇವರು ತಮ್ಮ ಪತ್ರ ಸಂಖ್ಯೆ: 52/04-05 ದಿನಾಂಕ: 12.7.2004 ರನ್ವಯ ಈ ಕಛೇರಿಗೆ ವರದಿ ಮಾಡಿರುತ್ತಾರೆ.

ಕೆಲಸಕ್ಕೆ ಹಾಜರಾಗಲು ನೀಡಿದ ಹದಿನೈದು ದಿನಗಳ ಕಾಲಾವಕಾಶವು ದಿನಾಂಕ: 25.6.2004 ರಂದು ಮುಕ್ತಾಯವಾಗಿರುತ್ತದೆ. ಈ ಕಛೇರಿಯ ಉಲ್ಲೇಖ (9)ರ ನೇಮಕಾತಿ ಆದೇಶವನ್ನು ದಿನಾಂಕ: 10.6.2004 ರಂದು ಸ್ವೀಕರಿಸಿದ ನಂತರವೂ ಕೆಲಸಕ್ಕೆ ಹಾಜರಾಗಲು ನೀಡಿದ ಹದಿನೈದು ದಿನಗಳ ಕಾಲಾವಕಾಶಕ್ಕಿಂತ ಇನ್ನೂ ಹೆಚ್ಚಿನ ಕಾಲಾವಕಾಶ ನೀಡಬೇಕೆಂದು ಈ ಅಭ್ಯರ್ಥಿಯು ಯಾವುದೇ ರೀತಿಯ ಕೋರಿಕೆಯನ್ನು ಈ ಇಲಾಖೆಗೆ ಸಲ್ಲಿಸಿರುವುದಿಲ್ಲ. ಈ ಹಿನ್ನೆಲೆಯಲ್ಲಿ ಮೇಲ್ಕಂಡ ಶ್ರೀ ಟಿ. ನಾಗರಾಜ ಹೊಳಲ್ಕೆರೆ ಇವರ ನೇಮಕಾತಿಯನ್ನು ರದ್ದುಪಡಿಸುವುದು ಸೂಕ್ತವೆಂದು ಮನಗಂಡು ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಇಎಸ್‌ಟಿ-1-270/2001-02, ದಿನಾಂಕ: 5ನೇ ಆಗಸ್ಟ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಉಲ್ಲೇಖ (1) ರಲ್ಲಿನ ಅಧಿಸೂಚನೆ ಅನ್ವಯ ಹಾಗೂ 1977ರ ಸಾಮಾನ್ಯ ನೇಮಕಾತಿ ನಿಯಮಗಳಲ್ಲಿನ 18 (3)ನೇ ನಿಯಮದನ್ವಯ ಪ್ರದತ್ತವಾದ ಅಧಿಕಾರದ ಮೇರೆಗೆ ಶ್ರೀ ನಾಗರಾಜ ಟಿ. ಬಿನ್ ತಿರುಮಲಪ್ಪ ಹೆಚ್. ಬೀರಲಿಂಗೇಶ್ವರ ದೇವಸ್ಥಾನದ ಹತ್ತಿರ ಕುರುಬರ ಬೀದಿ, ಹೊಳಲ್ಕೆರೆ, ಇವರನ್ನು ಈ ಇಲಾಖೆಯ ಬ್ಯಾಕ್‌ಲಾಗ್ ಹುದ್ದೆಯಲ್ಲಿ ಉಲ್ಲೇಖ (9) ರನ್ವಯ ದಿನಾಂಕ: 31.5.2004 ರಂದು ಪ್ರಥಮ ದರ್ಜೆ ಸಹಾಯಕರೆಂದು ನೇಮಕ ಮಾಡಿದ ಈ ಕಛೇರಿಯ ನೇಮಕಾತಿ ಆದೇಶವನ್ನು ಈ ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಲಾಗಿದೆ.

ಮೇಲ್ಕಂಡ ಅಭ್ಯರ್ಥಿಯು ಈ ತಕ್ಷಣದಿಂದ ಈ ಇಲಾಖೆಯಲ್ಲಿನ ಪ್ರಥಮ ದರ್ಜೆ ಸಹಾಯಕರ ಹುದ್ದೆಯ ನೇಮಕಾತಿ ಹಕ್ಕನ್ನು ಕಳೆದು ಕೊಂಡಿರುವರೆಂದು ಹಾಗೂ ಪ್ರಥಮ ದರ್ಜೆ ಸಹಾಯಕರ ಹುದ್ದೆಯ ಮೇಲೆ ಸದರಿಯವರು ಯಾವುದೇ ಹಕ್ಕನ್ನು ಹೊಂದಿರತಕ್ಕದ್ದಲ್ಲವೆಂದು ಹಾಗೂ ಸದರಿಯವರು ಪ್ರಥಮ ದರ್ಜೆ ಸಹಾಯಕರ ಹುದ್ದೆಯ ಮೇಲೆ ಯಾವುದೇ ಹಕ್ಕನ್ನು ಸಾಧಿಸತಕ್ಕದ್ದಲ್ಲವೆಂದು ಈ ಮೂಲಕ ಆದೇಶಿಸಿದೆ.

ನೇಮಕಾತಿ ಪ್ರಾಧಿಕಾರಿ ಹಾಗೂ ನೋಂದಣಿ ಮಹಾಪರಿವೀಕ್ಷಕರು
ಮತ್ತು ಮುದ್ರಾಂಕಗಳ ಆಯುಕ್ತರು, ಬೆಂಗಳೂರು.

ಪಿ.ಆರ್. 388

**Public Works Department**

**Office of the Executive Engineer, No.1, Buildings Division, Bangalore.**

**TENDER NOTIFICATION**

**( TWO COVER SYSTEM )**

**No. / EE / BLD-1 / TS-1 / VSSB - Fur / TND / 04-05 /100 Date: 10th August 2004**

The Government of Karnataka Public Works Department proposes to take up the work of **Providing Interior Furnishing to the Library in Ground Floor of Vidhana Soudha–South Block at Dr. B.R. Ambedkar Veedhi, Bangalore.** The estimated cost of the work is about **Rs.60.00 lakhs.**

Sealed tenders in duplicate in two covers comprising of **Cover-I** Technical bid and **Cover-II** Financial bid are invited from Registered Class I Contractors / Firms / Companies who have for the work noted below and will be received by the undersigned in this office upto **4.00 P.M (IST)** on the date noted in Col.No.10 subject to the conditions laid down in form No. PWG 65, KPWD Code. Vol .II. and Karnataka Transparency in Public Procurement Act-2003. The Technical bid ( Cover-I ) will be opened by the undersigned at his office at 4.30 P.M. on the same day if possible, other wise, on the next working day.

The tender documents can be obtained from this office on application and payment noted in col.No.5 (not refundable) in the form of D.D. drawn in favour of the Executive Engineer, No.1 Buildings Division, PWD, Bangalore .The tender documents will be issued subject to the conditions there of to the intending contractors on the day noted in Col.No.9 between **10.00 A.M. to 5.30 P.M.** (Except 1.30 to 2.15 P.M)

| Sl No | Name of Work | Approx. amount put to tender in Rs. | E.M.D 1% Rs. | Cost of Tender docu-ments in Rs. | Class of Contractors eligible | Time for comple-tion of work | Last Date of | | | No calls |
|---|---|---|---|---|---|---|---|---|---|---|
| | | | | | | | Receipt of appli-cation | Issue of tender sche-dule | Receipt of sealed tender | |
| 1 | 2 | 3 | 4 | 5 | 6 | 7 | 8 | 9 | 10 | 11 |
| 1 | Providing Interior Furnishing to the Library in Ground Floor of Vidhana Soudha – South Block at Dr. B.R. Ambedkar Veedhi, Bangalore | 60.00 Lakhs | 60000 | 3000+ 12% Taxes | Registered Class I Contractors/ Firms / Companies | 45 Days | 30-8-2004 | 1-9-2004 | 7-9-2004 | Ist |

**CONDITIONS :-**

1. Contractors are requested to submit the following documents in duplicate in the first cover inscribing the cover as **" Cover-I -Technical Bid ‘’** without fail at the time of submission of tender.

The eligibility of the contractor is based on the following criteria.

a) Should have successfully completed Providing interiors furnishing works costing not less than **Rs.30.00 Lakhs** in any one year during last five years (i.e., 1999-2000 to 2003-2004). A certificate from the competent authority shall be enclosed to that effect.
b) The applicant should have achieved a total financial turn over of at least **Rs.150 lakhs** in any year out of the past five years i.e., 1999-2000 to 2003-2004.
c) Capabilities with respect to personnel, equipment and construction or manufacturing facilities.
d) Financial Status and Capacity supported by
   i) Solvency Certificate issued by any Schedule / Nationalised Banks for a sum of **Rs.30.00 lakhs**.
   ii) Certificate towards availability of Credit/Overdraft facility from any Schedule/Nationalised Banks for a sum of **Rs.30.00** lakhs during the tenure of the contract.
   iii) Affidavit on stamp paper of **Rs.100.00** duly sworn to and executed.
e) Details of Technical staff and their experience.
f) The E.M.D. should be paid in the form of DD/ FDR and shall be drawn in favour of the **Executive Engineer, PWD, No.1, Buildings Division, Bangalore** and enclosed to the technical bid. The tenders without E.M.D. are liable for rejection. The minimum validity period of DD / FDR shall be for 180 days.

2. Contractors are requested to submit the price quoted in schedule “B“ in duplicate in second cover inscribing on the cover as **"Cover-II-Financial Bid"**.
3. The right of acceptance or rejection of the tenders rests with undersigned without assigning any reasons.
4. Any conditional tenders are liable for rejection without assigning any reasons.

5. The tenderers should produce their registration certificate /latest IT clearance while submitting applications requesting for issue of tender documents and also work done certificate from the competent Authority.
6. No materials will be supplied departmentally. The contractor have to make their own arrangements for procurement of all required materials / arranging electricity / water etc., complete.
7. The terms and conditions laid down as per Karnataka Transparency in Public Procurement act-2003 and subsequent amendments there in are applicable.
8. Financial Bid ( Cover-II) will be opened only if the contractor qualifies the conditions in Technical bid (cover-I) on a date to be intimated later .

**N.G. GOWDAIAH**
Executive Engineer, No.1, Buildings Division,
KPWD, SJP Campus, Sheshadri Road, Bangalore-01.

PR-384

**ಕಾರ್ಮಿಕ ಇಲಾಖೆ**

**ಕಾರ್ಮಿಕ ಅಧಿಕಾರಿಯವರ ಕಛೇರಿ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ**

**ಬಹಿರಂಗ ಹರಾಜು ಪ್ರಕಟಣೆ ಅಧಿಸೂಚನೆ**

**ಸಂಖ್ಯೆ: ಕಾಕಕೇಹಾ:ಎಎಸ್ ಟಿ:ಸಿಆರ್-19:2004-05, ದಿನಾಂಕ: 6ನೇ ಆಗಸ್ಟ್ 2004**

**ವಿಷಯ:** ಕರ್ನಾಟಕ ಕಾರ್ಮಿಕ ಕಲ್ಯಾಣ ಮಂಡಳಿಯ ಹಾಗೂ ಕಾರ್ಮಿಕ ಕಲ್ಯಾಣ ಮಂಡಳಿಯ ಹಾಗೂ ಕಾರ್ಮಿಕ ಕಲ್ಯಾಣ ಕೇಂದ್ರದ ಸುಸ್ಥಿತಿ/ದುಸ್ಥಿತಿ ನಿರುಪಯುಕ್ತ ಪೀಠೋಪಕರಣ, ಹೊಲಿಗೆ ಯಂತ್ರ, ಆಟಿಕೆ ಸಾಮಗ್ರಿಗಳನ್ನು ಹಾಗೂ ಇತರೆ ಸಾಮಗ್ರಿಗಳನ್ನು ಬಹಿರಂಗ ಹರಾಜು ಮಾಡುವ ಬಗ್ಗೆ.

**ಉಲ್ಲೇಖ:** 1) ಸರ್ಕಾರದ ಮಂಜೂರಾತಿ ಪತ್ರದ ಸಂಖ್ಯೆ: ಕಾಇ:103:ಎಲ್ಇಟಿ:2004, ದಿನಾಂಕ: 12.04.2004.
2) ಮಾನ್ಯ ಕಲ್ಯಾಣ ಆಯುಕ್ತರು, ಕಾರ್ಮಿಕ ಕಲ್ಯಾಣ ಮಂಡಳಿ, ಬೆಂಗಳೂರು, ಇವರ ಕಛೇರಿ ಆದೇಶ ಸಂಖ್ಯೆ: ಕಾಕನಿ:ಆಡಳಿತ-1:ಸಿಆರ್-72:03-04, ದಿನಾಂಕ: 13.04.2004.

ಉಲ್ಲೇಖದಲ್ಲಿ ತಿಳಿಸಿರುವ ಸರ್ಕಾರದ ಆದೇಶದ ಪ್ರಕಾರ ಭದ್ರಾವತಿ ಕಾರ್ಮಿಕ ಕಲ್ಯಾಣ ಕೇಂದ್ರಕ್ಕೆ ಸಂಬಂಧಪಟ್ಟ ಅನುಬಂಧದಲ್ಲಿ ತೋರಿಸಿರುವ ಸುಸ್ಥಿತಿ/ದುಸ್ಥಿತಿ ನಿರುಪಯುಕ್ತ ಪೀಠೋಪಕರಣ ಹಾಗೂ ಇತರೆ ಸಾಮಗ್ರಿಗಳನ್ನು ದಿನಾಂಕ: 16.09.2004 ರಂದು ಬೆಳಿಗ್ಗೆ 11.30 ಘಂಟೆಗೆ ಕಾರ್ಮಿಕ ಅಧಿಕಾರಿಯವರ ಕಛೇರಿ, 4ನೇ ಕ್ರಾಸ್, ತಿಲಕ ನಗರ, ಶಿವಮೊಗ್ಗ, ಇವರ ಕಛೇರಿಯ ಆವರಣದಲ್ಲಿ ಬಹಿರಂಗ ಹರಾಜು ಮೂಲಕ ಯಾವ ರೀತಿ ಇದೆಯೋ ಅದೇ ರೀತಿ ವಿಲೇವಾರಿ ಮಾಡಲಾಗುವುದೆಂದು ಸಾರ್ವಜನಿಕರಿಗೆ ಈ ಮೂಲಕ ತಿಳಿಯಪಡಿಸಲಾಗಿದೆ.

**ಬಹಿರಂಗ ಹರಾಜು ಮಾಡುವ ಸಾಮಗ್ರಿಗಳ ವಿವರಗಳು**

| ಕ್ರಮ ಸಂಖ್ಯೆ | ಬಹಿರಂಗ ಹರಾಜು ಮಾಡುವ ಸಾಮಗ್ರಿಗಳ ವಿವರಗಳು | ಸುಸ್ಥಿತಿ | ದುಸ್ಥಿತಿ | ನಿರುಪಯುಕ್ತ | ಒಟ್ಟು |
|---|---|---|---|---|---|
| 1 | 2 | 3 | 4 | 5 | 6 |
| **I** | **ಪೀಠೋಪಕರಣಗಳು** | | | | |
| 1 | ಟೀಕ್ ವುಡ್ ಮರದ ಕುರ್ಚಿಗಳು | 1 | 1 | - | 2 |
| 2 | ಟೀಕ್ ವುಡ್ ಮರದ ಬೆಂಚುಗಳು | 3 | - | - | 3 |
| 3 | ಸ್ಟೀಲ್ ಸ್ಟೂಲ್ | 5 | - | - | 5 |
| **II** | **ಹೊಲಿಗೆ ಯಂತ್ರಗಳು** | | | | |
| 1 | ಉಷಾ ಹೊಲಿಗೆ ಯಂತ್ರಗಳು | 5 | 2 | - | 7 |
| 2 | ಕತ್ತರಿ | 1 | - | - | 1 |
| 3 | ಸ್ಕ್ರೂ ಡ್ರೈವರ್ | 2 | - | - | 2 |
| 4 | ಹೊಲಿಗೆ ಯಂತ್ರಗಳ ಕವರ್ | - | - | 2 | 2 |
| **III** | **ಕ್ರೀಡಾ ಸಾಮಗ್ರಿಗಳು** | | | | |
| 1 | ಕೇರಂ ಬೋರ್ಡ್ | - | - | 4 | 4 |
| 2 | ಕೇರಂ ಪಾನ್ಸ್ 1 ಸೆಟ್ | 1 | - | - | 1 |
| 3 | ಕೇರಂ ಸ್ಟ್ರೈಕರ್ | 1 | - | - | 1 |
| 4 | ಜಿಗಿತದ ಹಗ್ಗ | - | - | 1 | 1 |
| 5 | ಮರದ ಕುದುರೆ | - | 1 | - | 1 |
| 6 | ರಾಕಿಂಗ್ ಹಾರ್ಸ್ | - | 1 | - | 1 |

| 1 | 2 | 3 | 4 | 5 | 6 |
|---|---|---|---|---|---|
| IV | ಗ್ರಂಥಾಲಯ ಪುಸ್ತಕಗಳು | | | | |
| 1 | ಕನ್ನಡ ಕಾದಂಬರಿ | 3 | - | - | 3 |
| V | ಮನರಂಜನೆ ಸಾಮಗ್ರಿಗಳು | | | | |
| 1 | ರೇಡಿಯೋ ಈಕೋ ನ್ಯಾಷನಲ್ ಎ.ಸಿ. | - | - | 1 | 1 |
| 2 | ಸ್ಪೀಕರ್ ಚಿಕ್ಕದು | - | 1 | - | 1 |
| 3 | ಟಿ.ವಿ. ಸ್ಟ್ಯಾಂಡ್ (3 ಸ್ಟೆಪ್ಸ್) | 1 | - | - | 1 |
| 4 | ಅರ್ಮಾನ್ ಸ್ಟೆಬಿಲೈಸರ್ | 1 | - | - | 1 |
| 5 | ಅಂಟೆನಾ | - | - | 1 | 1 |
| 6 | ಅಂಟೆನಾ ವೈರ್ (60 ಅಡಿ) | 1 | - | - | 1 |
| 7 | ವಿಡಿಯೋ ಕಾನ್ ಬಣ್ಣದ ಟಿ.ವಿ. | - | 1 | - | 1 |
| VI | ಇತರೆ ಸಾಮಗ್ರಿಗಳು | | | | |
| 1 | ಡೋರ್ ಲಾಕ್ ವಿತ್ ಕೀಗಳು | 2 | - | - | 2 |
| 2 | ಗ್ರೋದೇಜ್ ನವ ತಾಲೆ ಬೀಗ ಕೀ ಸೇರಿ | 1 | - | - | 1 |
| 3 | ಟ್ಯೂಬ್ ಲೈಟ್ ಡ್ರೇಂ ಸೆಟ್ | 3 | - | - | 3 |
| 4 | ರೆಕ್ಸಿನ್ ಕಪ್ಪು ಹಲಗೆ | 1 | - | - | 1 |
| 5 | ಪ್ಲಾಸ್ಟಿಕ್ ಕಸದ ಬುಟ್ಟಿ | 1 | - | - | 1 |
| 6 | ನಾಮ ಫಲಕ ಬೋರ್ಡ್ | - | - | 1 | - |

**ಬಹಿರಂಗ ಹರಾಜಿನ ಷರತ್ತು ಮತ್ತು ನಿಯಮಗಳು**

1. ಬಹಿರಂಗ ಹರಾಜಿನಲ್ಲಿ ಭಾಗವಹಿಸುವ ಪ್ರತಿಯೊಬ್ಬ ಸವಾಲುದಾರರು ರೂ.2,000/- ಗಳನ್ನು ಈ ಕಛೇರಿಯಲ್ಲಿ ಮುಂಗಡವಾಗಿ ಬಹಿರಂಗ ಹರಾಜಿನ ದಿನಾಂಕದಂದು ಬೆಳಿಗ್ಗೆ 10.00 ಗಂಟೆಗೆ ಠೇವಣಿ ಮಾಡಿ ನಂತರ ಹರಾಜಿನಲ್ಲಿ ಭಾಗವಹಿಸಬಹುದು ಠೇವಣಿ ಮಾಡಿದ ಬಿಡ್ಡುದಾರರು ಮಾತ್ರ ಹರಾಜಿನಲ್ಲಿ ಭಾಗವಹಿಸಲು ಅರ್ಹರಿರುತ್ತಾರೆ.
2. ಮಾನ್ಯ ಕಲ್ಯಾಣ ಆಯುಕ್ತರು, ಕಾರ್ಮಿಕ ಕಲ್ಯಾಣ ಮಂಡಳಿ, ಬೆಂಗಳೂರು, ಇವರಿಂದ ನೇಮಿಸಲ್ಪಟ್ಟ ಕಾರ್ಮಿಕ ಅಧಿಕಾರಿ, ಶಿವಮೊಗ್ಗ, ಇವರು ಬಹಿರಂಗ ಹರಾಜು ನಡೆಸುವ ಅಧಿಕಾರ ಹೊಂದಿರುತ್ತಾರೆ.
3. ಬಹಿರಂಗ ಹರಾಜಿನಲ್ಲಿ ಅತಿ ಹೆಚ್ಚಿನ ಮೊತ್ತಕ್ಕೆ ಕರೆಯುವಂತಹ ಬಿಡ್ಡುದಾರರನ್ನು ಸವಾಲುದಾರರೆಂದು ಪರಿಗಣಿಸಲಾಗುವುದು.
4. ಬಹಿರಂಗ ಹರಾಜಿನಲ್ಲಿ ಅತಿ ಹೆಚ್ಚಿನ ಬೆಲೆಗೆ ಕೂಗಿದ ಹರಾಜುದಾರರನ್ನು ಹರಾಜಿನಲ್ಲಿ ಕೂಗಿದ ಒಟ್ಟು ಮೊತ್ತದ ಶೇಕಡ 25 ರಷ್ಟು ಹಣವನ್ನು ಸ್ಥಳದಲ್ಲಿಯೇ ನಗದಾಗಿ ಪಾವತಿ ಮಾಡಬೇಕು. (ಠೇವಣಿ ಮೊತ್ತವನ್ನು ಹೊರತುಪಡಿಸಿ) ಸದರಿ ಹರಾಜನ್ನು ಅಧಿಕಾರಿಗಳು ಅಂಗೀಕರಿಸಲ್ಪಟ್ಟು ಉಳಿದ ಶೇಕಡ 75 ರಷ್ಟು ಹಣವನ್ನು ನಗದಾಗಿ ಪಾವತಿಸಿದ ನಂತರ ತಮ್ಮ ಸ್ವಂತ ಖರ್ಚಿನಿಂದ ಹಾಗೂ 7 ದಿನಗಳೊಳಗಾಗಿ ಸಾಮಗ್ರಿಗಳನ್ನು ತೆಗೆದುಕೊಂಡು ಹೋಗಲು ಅನುಮತಿ ನೀಡಲಾಗುವುದು.
5. ಎಲ್ಲ ಹಣವನ್ನು ಕಾರ್ಮಿಕ ಅಧಿಕಾರಿ, ಶಿವಮೊಗ್ಗ, ಇವರ ಕಛೇರಿಯಲ್ಲಿ ನಗದು ರೂಪದಲ್ಲಿ ನೀಡಬೇಕು. ಚೆಕ್ಕುಗಳನ್ನು / ಡಿ.ಡಿ. ಗಳನ್ನು ಸ್ವೀಕರಿಸಲಾಗುವುದಿಲ್ಲ.
6. ಮಾರಾಟ ತೆರಿಗೆಯನ್ನು ಹಾಗೂ ಸರ್ಕಾರಕ್ಕೆ ಪಾವತಿಸಬೇಕಾದ ಇತರೆ ತೆರಿಗೆಗಳನ್ನು ಚಲಾವಣೆಯಲ್ಲಿರುವ ದರದ ನಿಯಮಗಳ ಆಧಾರದ ಮೇರೆಗೆ ಸವಾಲಿನ ಹಣದ ಜೊತೆಗೆ ವಸೂಲು ಮಾಡಲಾಗುವುದು.
7. ಬಹಿರಂಗ ಹರಾಜು ಮಾಡುವ ವೇಳೆಯಲ್ಲಿ ಏನಾದರೂ ತಕರಾರುಗಳು ಬಂದಲ್ಲಿ ಕಾರ್ಮಿಕ ಅಧಿಕಾರಿಗಳು ಕೈಗೊಳ್ಳುವ ನಿರ್ಣಯವೇ ಅಂತಿಮ ತೀರ್ಮಾನವಾಗಿರುತ್ತದೆ.
8. ಬಹಿರಂಗ ಹರಾಜನ್ನು ಯಾವುದೇ ಕಾರಣಕ್ಕಾಗಿ ರದ್ದುಗೊಳಿಸುವ ಅಥವಾ ಮುಂದೂಡುವ ಅಥವಾ ಕರೆದಿರುವುದನ್ನು ತಿರಸ್ಕರಿಸುವ ಅಧಿಕಾರವನ್ನು ಕಾರ್ಮಿಕ ಅಧಿಕಾರಿ, ಶಿವಮೊಗ್ಗ, ಇವರು ಹೊಂದಿರುತ್ತಾರೆ. ಇವರ ನಿರ್ಣಯವೇ ಅಂತಿಮ ತೀರ್ಮಾನವಾಗಿರುತ್ತದೆ.
9. ಬಹಿರಂಗ ಹರಾಜಿನಲ್ಲಿ ಭಾಗವಹಿಸುವ ಬಿಡ್ಡುದಾರರು ಹರಾಜು ಮಾಡಲಿರುವ ಸಾಮಗ್ರಿಗಳನ್ನು ಹೇಗಿದೆಯೋ ಹಾಗೆ ಇರುವ ಸ್ಥಿತಿಯಲ್ಲಿ ಕಾರ್ಮಿಕ ಅಧಿಕಾರಿಗಳು, ಶಿವಮೊಗ್ಗ ಉಪವಿಭಾಗ, ಶಿವಮೊಗ್ಗ, ಕಛೇರಿ 4ನೇ ಕ್ರಾಸ್, ತಿಲಕ್ ನಗರ, ಶಿವಮೊಗ್ಗ, ಇವರ ಕಛೇರಿಯಲ್ಲಿ ಬಿಡ್ಡು ಕರೆಯುವ ದಿನಾಂಕಕ್ಕಿಂತಲೂ ಮುಂಚಿತವಾಗಿ ನೋಡಬಹುದು.
10. ಬಹಿರಂಗ ಹರಾಜು ಮುಗಿದ ನಂತರ ಯಶಸ್ವಿಯಾಗದ ಸವಾಲುದಾರರ ಠೇವಣಿ ಹಣವನ್ನು ಕೂಡಲೇ ಸ್ಥಳದಲ್ಲಿ ಹಿಂದಿರುಗಿಸಲಾಗುವುದು.

**ಎಸ್.ಸಿ. ರಾಮಚಂದ್ರ**

ಪಿ.ಆರ್. 390 ಕಾರ್ಮಿಕ ಅಧಿಕಾರಿ, ಶಿವಮೊಗ್ಗ.